


# ತಿರುಮಲೆ ತಿರುಪತಿ ದೇವಸ್ಥಾನಗಳು

# ಶ್ರೀವಾರಿ ಸೇವೆ

## ಭಕ್ತರಿಗೆ ಸ್ವಚ್ಛಂದ ಸೇವಾವಕಾಶ



ಶ್ರೀ ವೆಂಕಟೇಶ್ವರ ಸ್ವಾಮಿಯು ನೆಲೆಸಿರುವ ಪವಿತ್ರವಾದ ತಿರುಮಲೆಗೆ ವರ್ಷಂಪ್ರತಿ ಲಕ್ಷಾಂತರ ಮಂದಿ ಭಕ್ತರು ಬಂದು ಹೋಗುತ್ತಾರೆ. ದೇಶದ ನಾನಾ ಭಾಗಗಳಿಂದ ಬರುವ ಈ ಯಾತ್ರಿಕರ ಸೇವೆಯಲ್ಲಿ ಮತ್ತೂ ಹೆಚ್ಚಿನ ಅನುಕೂಲಗಳನ್ನುಂಟುಮಾಡಲೆಂದು ತಿರುಮಲ ತಿರುಪತಿ ದೇವಸ್ಥಾನಗಳು "ಶ್ರೀವಾರಿ ಸೇವೆ"ಯನ್ನು ಆರಂಭಿಸಿದೆ.

ಸೇವಾ ಮನೋಭಾವವನ್ನು ಹೆಚ್ಚಿಸಿ, ಸೌಹಾರ್ದತೆಯನ್ನು ಬೆಳೆಸಿ ಭಕ್ತಿಭಾವವನ್ನು ಸರ್ವತ್ರ ಹರಡುವಂತಹ ಒಂದು ವಿಶಿಷ್ಟವಾದ ಅವಕಾಶವನ್ನು ಈ ಸೇವೆಯು ಒದಗಿಸುತ್ತದೆ. ಶ್ರುತಿ ಸ್ಮೃತಿಗಳು ಹೇಳುವಂತೆ ಗರ್ಭಗೃಹದಲ್ಲಿರುವ ಸ್ವಾಮಿಯನ್ನು ಆರಾಧಿಸುವುದರ ಮೂಲಕವಾಗಿ ಮಾತ್ರವೇ ಅಲ್ಲದೆ, ಆತನ ಭಕ್ತರ ಸೇವೆಯನ್ನು ಮಾಡುವುದರಿಂದಲೂ ದೈವಾನುಗ್ರಹವನ್ನು ಪಡೆಯಬಹುದು. ಹೀಗಾಗಿ "ಶ್ರೀವಾರಿ ಸೇವೆ"ಯು ಸ್ವಾಮಿಯ ಭಕ್ತರನ್ನು ನಿಸ್ವಾರ್ಥದಿಂದ ಸೇವಿಸುವುದರ ಮೂಲಕ ಶ್ರೀನಿವಾಸ ದೇವರ ಸೇವೆ ಮಾಡಿ ಅಧಿಕ ಫಲ ಪಡೆಯುವಂತೆ ಮಾಡುವುದು.

ಭಕ್ತರು ತಮ್ಮ ಸ್ವಯಂಸೇವೆಯನ್ನು ಕೆಳಕಂಡ ಕ್ಷೇತ್ರಗಳಲ್ಲಿ ಮಾಡಬಹುದಾಗಿದೆ-

1. ಅನ್ನದಾನ ಯೋಜನೆ, 2. ಸರತಿಯ ಸಾಲು, 3. ಕಲ್ಯಾಣಕಟ್ಟೆ, 4. ಕಾಲುಹಾದಿಯ ಯಾತ್ರಿಕರಿಗೆ ನೆರವು ನೀಡುವಿಕೆ, 5. ಸಾಮಾನುಗಳನ್ನು ಭದ್ರಗೊಳಿಸುವ ಕೋಣೆ, 6. ವಾಹನ ನಿಲ್ದಾಣ, 7. ಉಚಿತ ವಸ್ತು ಸಾಗಣೆ ಕೇಂದ್ರ, 8. ಸ್ವಾಮಿ ಪುಷ್ಕರಿಣಿ 9. ಸಮಾಚಾರ ಕೇಂದ್ರ, 10. ಶ್ರೀವಾರಿ ಆಲಯ.

ಯಾತ್ರಿಕರು ತಮ್ಮ ಅಪೇಕ್ಷೆ, ಆಸಕ್ತಿಗಳಿಗೆ ತಕ್ಕಂತೆ ಸೇವಾ ಕ್ಷೇತ್ರವನ್ನು ಆಯ್ಕೆ ಮಾಡಿಕೊಳ್ಳಬಹುದು. ಅನ್ನದಾನಂ ಭವನದಲ್ಲಿ ಕೆಲಸ ಮಾಡುತ್ತಿರುವ ಕೌಂಟರಿನಲ್ಲಿ ತಮ್ಮ ಹೆಸರನ್ನು ಕೂಡಲೇ ನೊಂದಾವಣೆ ಮಾಡಿಕೊಳ್ಳಬಹುದು. ಹತ್ತು ಮಂದಿಗೆ ಕಡಿಮೆಯಿಲ್ಲದಂತೆ ಒಂದು ಗುಂಪಿನಲ್ಲಿ ಒಂದು ವಾರಕ್ಕೆ ಕಡಿಮೆಯಾಗದಂತೆ ಸೇವೆ ಸಲ್ಲಿಸಬಯಸುವವರು ಮೊದಲೇ ತಿಳಿಸಿ ಸೇವೆಯಲ್ಲಿ ಭಾಗವಹಿಸಬಹುದು. ಇವರಿಗೆ ಉಚಿತ ವಸತಿ ಹಾಗೂ ಭೋಜನ ಸೌಕರ್ಯವನ್ನು ತಿರುಮಲೆಯಲ್ಲಿ ಒದಗಿಸಲಾಗುವುದು. ಭಜನ ಸಂಘಗಳೂ ಸ್ಫೂರ್ತಿದಾಯಕವಾದ ಈ ಸೇವೆಯಲ್ಲಿ ಭಾಗವಹಿಸಬಹುದು.

"ಶ್ರೀವಾರಿಸೇವೆ"ಯಲ್ಲಿ ಪಾಲು ಹಂಚಿಕೊಳ್ಳಬಯಸುವ ಯಾತ್ರಿಕ ಭಕ್ತರು ತಿರುಮಲೆಯ ಅನ್ನದಾನಂ ಸಮುದಾಯ ಭವನದಲ್ಲಿರುವ ಶ್ರೀವಾರಿ ಸೇವೆ ವಿಭಾಗದಲ್ಲಿ ತಮ್ಮ ಹೆಸರನ್ನು ನಮೂದಿಸಿಕೊಳ್ಳಬೇಕೆಂದು ಕೋರಲಾಗಿದೆ.

ಹೆಚ್ಚಿನ ವಿವರಗಳಿಗೆ : ಶ್ರೀವಾರಿಸೇವೆ ವಿಭಾಗ ಅನ್ನದಾನಂ ಕಾಂಪ್ಲೆಕ್ಸ್ - ತಿರುಮಲ, ದೂರವಾಣಿ - 08574 - 79693.

ಪೌರಸಂಬಂಧಾಧಿಕಾರಿಗಳು, ತಿ. ತಿ. ದೇವಸ್ಥಾನಗಳು - ತಿರುಪತಿ. ದೂರವಾಣಿ - 08574 - 32813.

ಕಾರ್ಯನಿರ್ವಹಣಾಧಿಕಾರಿ







ಜಯ ಭೋ ಜಯ ಭೋ ಜಯ ವೆಂಕಟೇಶ್ವರ ಪ್ರಭೋ
ಜಯಕರ್ತಾ ಭಯಹರ್ತಾ ಅಭಯದಾಯಕ ಮೂರ್ತೇ ॥ ಪ ॥

ಫಣಿಗಿರಿ ವರ ಫಣಮಂದಿರ ಪ್ರಣತ ಮನೋಹರ
ಘನ ಸದ್ಗುಣ ಗಣಪೂರ್ಣ ಘನಶ್ಯಾಮಲ ವರ್ಣ
ಮನಮಾನಸ ಮುನಿತಾಪಸ ಮನೋಮಾನಸ ಹಂಸ
ದನು ಸುತಹರ ಧೇನು ಸಂಹರ ದಿನ ಮಣೀಶ ರುಚಿರ ॥ 1 ॥

ವನಜಾಕ್ಷಾ ಅವನೀಜಾಂತಕ ವನಜಾಸನ ಜನಕ
ಕನಕಾಕ್ಷಹ ಕನಕಾಲಯ ಕನಕಸ್ತ್ರೀ ಪ್ರಿಯಾ
ವನಭ್ರಮಣಾ ಅವನಿರಮಣಾ ವಿನತಾತ್ಮಜಗಮನಾ
ಅನಿಮಿತ್ತಜ ಅನಸೂಯಜ ಅನಿಮಿಷ ಇಂದ್ರಾನುಜಾ ॥ 2 ॥

ಅರಿದರಧರ ಅರಿಪರಿಹರ ಅರುಣಾಂಬರಧರ
ಚಿರಮಣಿ ರುಚಿರಾಭರಣನು ಚರಸುರತರು ವೀರ
ಸುರ ಪರಮಾಪ್ತನೇ ಸಾಸಿರ ಕ್ರೀಡಾಶ್ಚರ್ಯಾಗಾರಾ
ಕಲಿ ಕಲುಷಹರ ಕರುಣಾಕರ ಪ್ರಸನ್ವೇಂಕಟೇಶ್ವರ ॥ 3 ॥

- ಶ್ರೀ ಪ್ರಸನ್ನ ವೆಂಕಟದಾಸರು.





ಸಂದರ್ಶಿಸಿ ಆನಂದಿಸಿ

# ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ

## ತಿರುಪತಿ

# ವಾರ್ಷಿಕ ತೆಪ್ಪೋತ್ಸವ

## 27-12-2001 ರಿಂದ 29-12-2001

| | | |
|---|---|---|
| 27-12-2001 | ಗುರುವಾರ | ಶ್ರೀ ವಿನಾಯಕ ಶ್ರೀ ಚಂದ್ರಶೇಖರಸ್ವಾಮಿ ಯವರಿಗೆ. |
| 28-12-2001 | ಶುಕ್ರವಾರ | ಶ್ರೀ ಸುಬ್ರಹ್ಮಣ್ಯಸ್ವಾಮಿಯವರಿಗೆ. |
| 29-12-2001 | ಶನಿವಾರ | ಶ್ರೀ ಕಪಿಲೇಶ್ವರಸ್ವಾಮಿಯವರಿಗೆ. |

ಸೂಚನೆ : ಧನುರ್ಮಾಸದಲ್ಲಿ ನಡೆಯುವ ಈ ತಪ್ಪೋತ್ಸವ ಕಾರ್ಯಕ್ರಮವು ಅತ್ಯಂತ ಆಕರ್ಷಕವಾಗಿ ವಿದ್ಯುತ್ಕಾಂತಿಯಲ್ಲಿ ವರ್ಣಮಯವಾಗಿ ನಡೆಯುತ್ತದೆ.

ತಾವೂ ಬನ್ನಿ. ತಿ.ತಿ.ದೇ. ತಮ್ಮವರನ್ನೂ ಕರೆತನ್ನಿ.



ಯಾತ್ರಿಕ ಭಕ್ತರಲ್ಲಿ.....

ವಿನಂತಿ

"ಡಯಲ್ – ಯುವರ್ ಇ.ಓ."



ತಿರುಮಲೆಯಲ್ಲಿ ತಮ್ಮ ಅನುಭವಕ್ಕೆ ಬಂದ ಕುಂದು ಕೊರತೆಗಳ ಬಗ್ಗೆ ಹೆಚ್ಚು - ಕಡಿಮೆಗಳ ಬಗ್ಗೆ - ಸಲಹೆ ಸೂಚನೆಗಳನ್ನು ಕಾರ್ಯನಿರ್ವಹಣಾಧಿಕಾರಿಯವರಿಗೆ ನೇರವಾಗಿ ನೀಡಬಹುದು. ಅದಕ್ಕಾಗಿ ಪ್ರತಿ ಶುಕ್ರವಾರ ಬೆಳಗ್ಗೆ 8-30 ರಿಂದ 9-00 ಗಂಟೆಯವರೆಗೆ ತಾವು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳೊಡನೆ ದೂರವಾಣಿಯಲ್ಲಿ ಮಾತನಾಡಬಹುದು.

*ದೂರವಾಣಿ ಸಂಖ್ಯೆ - 08574-77261.*

ಯಾತ್ರಿಕರ ಸೌಕರ್ಯಗಳನ್ನು ಹೆಚ್ಚಿಸಲು
ತಮ್ಮ ಸುಲಭತರ ಯಾತ್ರೆ ಕೈಗೂಡಲು
ದಯವಿಟ್ಟು ಮಾತನಾಡಿ.





ಗೌರವ ಸಂಪಾದಕರು :
**ಡಾ|| ಪಿ. ಕೃಷ್ಣಯ್ಯ**, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
**ಡಾ|| ಎನ್.ಎಸ್. ರಾಮಮೂರ್ತಿ**,

ಮುದ್ರಣ :
**ಐ. ಪಾರ್ವತೀಶ್ವರ ರಾವ್**,
*ಬಿ.ಎ.,ಎಲ್.ಪಿ..ಟಿ.,*
ಮ್ಯಾನೇಜರ್,
ತಿ.ತಿ.ದೇ. ಮುದ್ರಣಾಲಯ, ತಿರುಪತಿ.

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್, ಎಂ.ಎ.

ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ-
*ಸಂಪಾದಕರು*
*ತಿರುಮಲೆ ತಿರುಪತಿ ದೇವಸ್ಥಾನಗಳು,*
*ತಿರುಪತಿ.*

ಸಪ್ತಗಿರಿಯ ಎಲ್ಲ ಭಾಷೆಯ
ಪ್ರತಿಗಳೂ ಎಲ್ಲ
ತಿ.ತಿ.ದೇ.
ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ರೂ. 5/-**
**ವಾರ್ಷಿಕ ಚಂದಾ ರೂ. 60/-**
**ಆಜೀವ ಚಂದಾ ರೂ. 500/-**


*ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. -ಸಂ||*

ವೇಂಕಟಾದ್ರಿ ಸಮಂಸ್ಥಾನಂ ಬ್ರಹ್ಮಾಂಡೇ ನಾಸ್ತಿ ಕಿಂಚನ
ವೇಂಕಟೇಶ ಸಮೋದೇವೋ ನ ಭೂತೋ ನ ಭವಿಷ್ಯತಿ


ಸಂಪುಟ - 32 ಡಿಸೆಂಬರ್ 2001 ಸಂಚಿಕೆ - 7


# ಮಾರ್ಗಶಿರ ಸಂಚಿಕೆ

## ವಿಷಯಸೂಚಿ



ಮುಖಚಿತ್ರ : *ಶ್ರೀಕೃಷ್ಣ ಅಲಂಕಾರದಲ್ಲಿ ಮಲೆಯಪ್ಪಸ್ವಾಮಿ.*

ಹಿಂಬದಿಯಲ್ಲಿ : *ಶ್ರೀ ಗೋದಾದೇವಿ - ಚಿತ್ರ - ಶಿವಪ್ರಸಾದ್.*

# ನಿಮ್ಮೊಡನೆ ಎರಡು ಮಾತು......



''ಮಾನವ ಸೇವೆಯೇ ಮಾಧವ ಸೇವೆ'' ಎಂಬ ಆರ್ಯೋಕ್ತಿಯನ್ನು ಅನಾದಿಯಿಂದ ಆದರ್ಶವಾಗಿಸಿಕೊಂಡು ಜೀವನ ನಡೆಸುತ್ತ ಬಂದಿದ್ದಾರೆ ಭಾರತೀಯರು. ಪ್ರತಿ ಆತ್ಮದಲ್ಲಿಯೂ ಪರಮಾತ್ಮ ಇರುವನೆಂದೂ, ವಿಶ್ವದಲ್ಲಿನ ಎಲ್ಲ ಅಣುಗಳೂ ಆ ಪರಮಾತ್ಮನ ಸ್ವರೂಪವೇ ಎಂದೂ ಆರಾಧಿಸುತ್ತ ಬಂದಿದ್ದಾರೆ. ಹಾಗಾಗಿಯೇ ಒಂದು ಚಿಕ್ಕ ಇರುವೆಗೂ ಹಾನಿ ಮಾಡುವುದು ಪಾಪವೆಂದೂ, ಅಪಕಾರಿಗೂ ಸಹ ಉಪಕಾರವನ್ನೇ ಮಾಡಬೇಕೆಂದೂ ಬಲವಾಗಿ ನಂಬುವ ಮಂದಿ ನಾವು.

ಕಷ್ಟ ಬಂದಾಗ, ಕಣ್ಣೀರು ಹರಿದಾಗ ಪಕ್ಕದಲ್ಲಿದ್ದವರಿಗೆ ಸಾಂತ್ವನ ಹೇಳಿ ಹತ್ತಿರಕ್ಕೆ ಕರೆಯುವುದಕ್ಕಿಂತ ಪುಣ್ಯವಿಲ್ಲ. ಭಕ್ತರ ಹೃದಯವಾಸಿ ಭಗವಂತ. ಭಕ್ತರ ಸೇವೆ ಮಾಡುವುದರಿಂದಲೇ ಭಗವಂತನ ಸೇವೆಯೂ ಸಾಧ್ಯ. ಅಥವಾ ಹೀಗೂ ಹೇಳಬಹುದು - ನಾವು ಭಗವಂತನಿಗೆ ಯಾವುದೇ ಸೇವೆಯನ್ನೂ ಮಾಡತಕ್ಕ ಸಾಮರ್ಥ್ಯವನ್ನಾಗಲೀ ಸೌಲಭ್ಯವನ್ನಾಗಲೀ ಪಡೆದೇ ಇಲ್ಲ. ಭಕ್ತರ ಸೇವೆಯನ್ನು ಮಾತ್ರವೇ ಮಾಡಬಲ್ಲೆವು. ಆದ್ದರಿಂದ ಅದನ್ನೇ ಪರಮಾತ್ಮ ಸ್ವೀಕರಿಸುವನೆಂದು ಹೇಳುತ್ತಾರೆ. ಹಾಗಾಗಿಯೇ ಭಕ್ತಸೇವೆ - ಭಾಗವತ ಸೇವೆಯೇ ಭಗವಂತನ ಸೇವೆಯೆಂದರು.

ಈ ಸೂಕ್ಷ್ಮವಾದ ಧರ್ಮಸೂತ್ರವನ್ನು ಅಡಿಗಡಿಗೆ ಆಚರಿಸುವ ಆದರ್ಶ ತಿರುಮಲ ತಿರುಪತಿ ದೇವಸ್ಥಾನಗಳ ಧ್ಯೇಯ. ಎಲ್ಲಿ ಹೇಗೆ ಮಾನವ ಜನಾಂಗಕ್ಕೆ ತೊಂದರೆ ಆದರೂ ತನ್ನ ಪಾಲಿನ ಸೇವೆಯನ್ನು ಸಲ್ಲಿಸುತ್ತ ನಡೆದಿದೆ.

ನಿನ್ನೆ ಮೊನ್ನೆ - ಹೊಳೆಗಳು ತುಂಬಿ ಹರಿದಾಗ, ರಹದಾರಿಗಳೆಲ್ಲ ಮಳೆಯ ನೀರಿನಿಂದ ಆವೃತವಾಗಿ, ಸಾರಿಗೆಯ ಎಲ್ಲ ಸೌಲಭ್ಯಗಳೂ ಸ್ಥಿತ್ಯಂತರ ಹೊಂದಿ ಎಲ್ಲಿನವರು ಅಲ್ಲಿಯೇ ನಿಲ್ಲಬೇಕಾಗಿ ಬಂದಿತು. ಸ್ವಾಮಿಯ ದರ್ಶನಕ್ಕೆ ಬಂದ ಯಾತ್ರಿಕ ಭಕ್ತರು ಮರುಪ್ರಯಾಣದ ಅವಕಾಶವಿಲ್ಲದೆ ನಿಲ್ಲುವಂತಾದಾಗ, ಎಲ್ಲರಿಗಿಂತ ಮೊದಲು ಬಂದದ್ದು ತಿ. ತಿ. ದೇವಸ್ಥಾನಗಳು. ನಿಂತು ಹೋದವರು ನಿರುತ್ಸಾಹ ಪಡದಂತೆ ನೆರವಿಗೆ ಬಂದು ಅವರಿಗೆ ಆಹಾರ ಆವಾಸ ಸೌಲಭ್ಯ ಕಲ್ಪಿಸಿ ಬೆಂಬಲಕ್ಕೆ ನಿಂತಿತು. ಮಳೆಯಲ್ಲಿ ಜಲದಿಗ್ಬಂಧನದಲ್ಲಿ ಸಿಕ್ಕಿದ ಹಲವಾರು ಸಾವಿರ ಮಂದಿಗೆ ಆಹಾರದ ಪೊಟ್ಟಣಗಳನ್ನು ಹಂಚಿದ್ದೇ ಅಲ್ಲದೆ, ಕುಡಿಯುವ ನೀರಿನ ಪೊಟ್ಟಣಗಳನ್ನು ವಿತರಿಸಲಾಯಿತು. ಸಿಡಿಲು ಬಡಿದಂತೆ ಎರಗಿದ ಕುಂಭದ್ರೋಣದ ಮಳೆಯಲ್ಲಿ ಸಿಕ್ಕವರಿಗೆ ಸಹಾಯಮಾಡುವುದರಲ್ಲಿ ಶ್ರೀವಾರಿ ಸೇವೆಯ ಸ್ವಯಂ ಸೇವಕರ ಸಮಯೋಚಿತ ಸಹಾಯದ ಔಚಿತ್ಯ, ಔದಾರ್ಯಗಳನ್ನು ಹೇಳಿ ತೀರಿಸಲಾಗದು. ಅದರ ಬೆಲೆಯನ್ನು ತೂಕ ಹಾಕುವ ತ್ರಾಸುಗಳೂ ಇಲ್ಲ.

ಅದೇ ರೀತಿಯಲ್ಲಿ ರಸ್ತೆ ಸಾರಿಗೆಯ ಆಂಧ್ರಪ್ರದೇಶದ ಬಸ್‌ಗಳು ಎಲ್ಲೆಂದರಲ್ಲಿ ನಿಂತು ಹೋದವು. ಪ್ರಯಾಣಗಳೆಲ್ಲ ಕಠಿಣ ಭವ ತೊರೆಯಾದಾಗಲೂ, ಸ್ವಾಮಿಯನ್ನು ಕಂಡು ಕೈಮುಗಿಯುವ ಆಸಕ್ತಿಯಿಂದ ಬರುವವರ ಸಂಖ್ಯೆ ಕಡಿಮೆಯಾಗಲಿಲ್ಲ. ಸ್ವಾಮಿಯ ದರ್ಶನಕ್ಕೆ ಬಂದವರ, ಬರುವವರ, ಬಂದು ಹೋಗುವಿಕೆಯಲ್ಲಿ ತಮ್ಮ ಎಲ್ಲ ವಾಹನಗಳನ್ನೂ ತಿ.ತಿ.ದೇ. ಧಾರಾಳವಾಗಿ ಬಳಸಿ ಸಾರಿಗೆಯ ಅನುಕೂಲ ಮಾಡಿಕೊಟ್ಟಿದೆ.

ಅಷ್ಟೇ ಅಲ್ಲ; ಭಕ್ತರ ವೈದ್ಯ, ವಿದ್ಯ, ಕಲ್ಯಾಣ ಮಂಟಪ, ಉಚಿತ ಆಹಾರ ಆವಾಸಗಳ ಹಲವು ಹನ್ನೊಂದು ಸೌಕರ್ಯಗಳನ್ನು ಕಲ್ಪಿಸುತ್ತಿದೆ ತಿ. ತಿ. ದೇವಸ್ಥಾನಗಳು. ಎಲ್ಲೆಲ್ಲಿಂದಲೋ ಬರುವ ಸ್ವಾಮಿ ಭಕ್ತರಿಗೆ ಯಾವ ಇಬ್ಬಂದಿಗಳೂ ಉಂಟಾಗಬಾರದೆಂಬುದು ತಿ. ತಿ. ದೇವಸ್ಥಾನಗಳ ಆದರ್ಶ. ಭಕ್ತರೇ ಆಲಯಕ್ಕೆ ಮುಖ್ಯ. ಪ್ರಶಾಂತಚಿತ್ತದಿಂದ ಭಕ್ತರು ದೇವರನ್ನು ಸಂದರ್ಶಿಸಬೇಕು. ತಿರುಮಲೆಯಲ್ಲಿ ಸ್ವಾಮಿಯ ನಾಮಜಪದಿಂದ ತುಂಬಿ ತುಳುಕಿ ಪವಿತ್ರವಾಗಬೇಕು.

ಅದಕ್ಕೆ ತಿ. ತಿ. ದೇವಸ್ಥಾನಗಳಿಗೆ ಭಕ್ತರ ಸಹಕಾರ ಅತಿಮುಖ್ಯ.
ಪರೋಪಕಾರವೇ ಪುಣ್ಯ. ಪರಪೀಡನೆಯೇ ಪಾಪ.

**ಡಾ|| ಪಿ. ಕೃಷ್ಣಯ್ಯ,** ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ.
ತಿ.ತಿ.ದೇ.

# ಕನ್ನಡ ತಿರುಪ್ಪಾವೈ

- ಭಾವಾನುವಾದ – ಬಿ. ಎಸ್. ವೇಣುಗೋಪಾಲ್.

-1-

ಮಾರ್ಗಶಿರದುದಯದಲಿ ಯಮುನೆಯೊಳ್ಮಿಂದು ಸಂತಸದಿ
ಬಿಂದು ಮಾಧವನ ಭಜಿಸಿ ನೋಂಪಿಯಿಂ ಪಾಡುತಾಡುವ ಬನ್ನಿ
ಬನ್ನಿರೆನ್ನೆಲ್ಲ ಒಲವ ಗೆಳತಿಯರೇ ಮೋಕ್ಷ ಕಾಮಿಗಳಾಗುವ ಬನ್ನಿ
ಶತಕೋಟಿ ರವಿಚಂದ್ರ ನಯನ ವದನಾರವಿಂದ ವಿಶ್ವದಕ್ಷಿಣನು
ಗೋವಿಂದ ಗೋಪಾಲ ಮುಕ್ತಿ ಯಮುನೆಯ ತಟದಲ್ಲಿಹನು
ನೋಂಪಿಯಿಂ ಶರಣಾಗಿ ಬನ್ನಿರೆಂದೆನುತ ವೇಣುನಾದದಿ ಕರೆದಿಹನು
ಒಲಿದು ವರವೀವೆನೆಂದಿಹನು ಶಿಷ್ಟೇಷ್ಟ ನಂದಯಶೋದಾಕಂದ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು

-2-

ಅರಿತಾಚರಿಸಿ ನೋಂಪಿಯ ಭಕ್ತಿಯಮುನೆಯೊಳ್ಮಿಂದು
ವಿಮಲ ಚರಿತರೆ ವಿಶ್ವವಂದ್ಯರೆ ಭಾರತಿಯ ಮುದ್ದುಕುವರಿಯರೇ
ಬನ್ನಿ ಭಾಗವತರ ಸಿರಿಪಾದದಲ್ಲಿ ಪೊಡಮುಡುವ ಶಿರಬಾಗಿ
ಭಕ್ತಿರಸ ಪಾನದಿಂ ಮುದದಿ ನುತಿಸೋಣ ಭವದಾಸೆಗಳ ಬದಿಗಿಟ್ಟು
ಪಾಲ್ಮೊಸರು ಬೆಣ್ಣೆ ಬಯಕೆಯನೆ ಕಳೆದು ನರಹರಿಯ ನುತಿಸೋಣ
ಸರಸಜೋದ್ಭವ ಪಿತನ ಸಿರಿಪಾದದಲ್ಲಿ ಶರಣಾಗಿ ಅನ್ಯಥಾ ಶರಣಂ ನಾಸ್ತಿ
ನೀನೇ ಮುಕ್ತಿ ಎಂದೆನಲು ವರಾಹ ವಾಮನ ತಾನೊಲಿವ ತಪ್ಪದೆಲೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-3-

ತ್ರಿವಿಕ್ರಮನಿವನು ಸುರಾಸುರ ವಂದಿತ ಚರಣ ವಿಶ್ವಬಾಹು
ತಾನೊಲಿದು ವರವೀವ ನಮ್ಮ ನೋಂಪಿಗೆ ಮನಕರಗಿ ವಿಶ್ವಾತ್ಮ
ಕಳೆವುದೆಲ್ಲವೀ ಧರೆಯ ಬಂಧನ ನಶಿಸುವುವು ದುರಿತರಾಶಿಗಳೆಲ್ಲ
ಹಸಿರ ಸಿರಿಯಲ್ಲಿ ನಲಿಯೆ ಮರಿಮೀನು ಜಲಚರವಾನಂದದಲಿ
ತುಂಬಿ ಧನಧಾನ್ಯ ಸಂಪದ ನಲಿವಳೆನ್ನಮ್ಮ ಭಾರತಿಯು
ದುಂಬಿಗಳಿಂಚರದ ಮಧುರ ನಾದಮೋಂಕಾರನಾದ ತಾನಾಗಿ
ಸುರಭಿಗಳತಿಶಯದಿ ಹರಿಸುವುವು ಕ್ಷೀರಧಾರೆ ಧಾರೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-4-

ಓ ವರುಣ ಓ ವರುಣ ಬೆಳೆಬೆಳೆದು ನಿಲ್ಲು ಬಾನಿನೆತ್ತರಕೆ ಪವಮಾನ ಸುತನಂತೆ
ಪಾಂಚಜನ್ಯಶಾರ್ಙ್ಗಚಕ್ರಗಳಂತೆ ಮಿಂಚುತಭಯ ಧ್ವನಿಗೈದು
ಮಿಂದೆದ್ದು ಸಾಗರದಿ ಹರಿಸುನೀ ವರ್ಷಧಾರೆ ಧಾರೆ ಈ ಧರೆಗೆ
ತಪ್ಪಿದೊಡೆ ತಲ್ಲಣಿಸಿ ಸೃಷ್ಟಿ ಬಸವಳಿಯೆ ಖೇದಗೊಳ್ಳುವ ಭರದಿ
ಹೇಮಪುರಿ ನಿಲಯ ಸೃಷ್ಟಿಸ್ಥಿತಿಗೊಡೆಯ ಮಹೋತ್ಸಾಹ
ಧರ್ಮ ರಕ್ಷಣೆಗೆಂದು ಬಂದಿಹನು ಅನಂತಾನಂತ ನಂದನಂದನನಾಗಿ
ಸಿಂಧುಗಂಗೆ ಕಪಿಲೆಕಾವೇರಿ ಯಮುನೆ ಭೀಮೆ ಭದ್ರೆಯರೆಲ್ಲ ತುಂಬಿ ಬರಲೀ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-5-

ಅಚ್ಚರಿಯ ಶಿಶು ಗೋಕುಲದ ಕಣ್ಮಣಿ ನಂದಯಶೋದಾಕಂದ
ನವನೀತ ಚೋರನೆಂದೆನಿಸಿಹನು ವಸುದೇವ ದೇವಕೀ ತನಯ
ದಾಮೋದರನಾಗಿ ಸಾರಿಹನು ತಾ ಸಿಗುವೆ ಮಾತೆ ಮಮತೆಗೆಂದೆನುತ
ರಕ್ಷಿಸುತ ಯಕ್ಷರನು ಸಾರಿಹನು ಕಳೆವೆನಮಿತ ಜನ್ಮಗಳ ಪಾಪರಾಶಿಯನೆಲ್ಲ
ಸಿಗುವೆ ನಾ ಸತತ ಚಿಂತಿಪರಿಗೆಂದೆನುತ ನಮ್ಮ ಯದುಶೈಲನಾಥ ಕೃತಲಕ್ಷಣನು
ಭಾವಶುದ್ಧಿಯಲಿ ಶರಣಾಗಿ ಬೇಡಿದೊಡೆ ಗರುಡಗಮನ ಗೋಪತಿಯು
ಅಕ್ರೂರವರದ ಸಲಹುವನೆಮ್ಮ ಗೋವರ್ಧನೋದ್ಧಾರಿ ಕರುಣಾಂತರಂಗ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.





-6-

ವೇದಘೋಷಗಳೊಡನೆ ನವಿಲು ಕೋಗಿಲೆಗಳಾ ಸುಪ್ರಭಾತಧ್ವನಿ
ಮಾರ್ದನಿಸಿ ಪಾಂಚಜನ್ಯದ ನಾದದಲೋಂಕಾರ ತಾನಾಗಿ
ಮುಗಿಲಮುಟ್ಟಿಹುದು ಸರ್ವದೃಗ್ವ್ಯಾಸನ ಕೀರ್ತನೆ ಎಚ್ಚರಾಗದೇ
ಸಖಿ ತಾಯ್ತನವನಿತ್ತ ಮೊಲೆಯುಂಡು ಶಕಟನಿಗಾಯ್ತು ಮೋಕ್ಷ
ಶತ್ರುಮಿತ್ರರೆಲ್ಲರನು ಸಲಹುವೆನೆಂದವಗೆ ಸೀಮಾತೀತನಿಗೆ ನಮಿಸಿಹರು
ಎಚ್ಚರಾಗೆನ್ನಾತ್ಮಸಖಿ ಮುಕ್ತಿಮಾರ್ಗವ ಕೋರಿ ನುತಿಸೋಣ ಜ್ಞಾನಗಮ್ಯನನು
ಒಲವ ನೋಂಪಿಂಗೆ ತಾನೊಲಿದು ವರವೀವ ಚೆಲುವಚೆನ್ನಿಗ ತಪ್ಪದೆಲೆ
ಫಲಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-7-

ಹಕ್ಕಿಗಳಿಂಚರ ಹೊನ್ನಕಾಂತಿಯ ಬೆಳಗು ದುಂಬಿಗಳ ಝೇಂಕಾರದಲಿ
ಕಡೆಗೋಲ್ದನಿಯೊಡನೆ ಅಂದಚೆಂದದ ಬಳೆಗಳ ಝಣಝಣತ್ಕಾರ ಕೇಳಿಸದೇ
ಸಾಕು ನಿದ್ರೆಯ ನಟನೆ ನೋಡೈದಿಹರು ಭಕ್ತಶೇಖರರು ದರ್ಶನಕೆ
ಭಕುತೆ ಚೆಲುವೆ ನೀ, ಬಂಧಿತಾ ಸಿಂಧುಶಯನ ನಿನಗತಿಶಯದಿ, ಓ ಸಖಿಯೆ
ಹರಿಭಕ್ತಿಸಾರ ಸಾಗರಕೆ ನಡೆಸಮ್ಮ ಕಾಲ ಸರಿಯುವ ಮುನ್ನ
ಮಾರ್ಗಶಿರ ನೋಂಪಿಗೆಮ್ಮನನುಗೊಳಿಸಿ ನಡೆಸು ಬಾ ಗೋಪತಿಯಡೆಗೆ
ಯೋಗಿಜನ ಹೃತ್ಕಮಲವಾಸನನು ಭವಭೀತಿ ಬಿಡಿಸೆಂದು ನುತಿಸೋಣ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-8-

ಕಾವಳದಿ ನಡೆದಿರಲು ಧೇನುಗಳಾತುರದಿ ಜೀವಜಂತುಗಳೆಚ್ಚರಾಗಿಹುವು
ಮಾರ್ದನಿಸಿಹುದು ನಂದಗೋಕುಲ ಧೇನು ಘಂಟಾರವದಿ
ಎಚ್ಚರಾಗದೆ ಕೇಳಿಸದೇ ನಮ್ಮೊಲವ ಕರೆ ಏನಿದೀ ಯೋಗನಿದ್ರೆಯ ನಟನೆ
ನಡೆದಿಹರೆಲ್ಲ ಗೆಳತಿಯರು ಯಮುನೆಯೆಡೆಗೆ ಕಾದಿಹರು ನಿನಗಾಗಿ
ಅಶ್ವಕೇಶಿ ಚಾಣೂರಮರ್ದನ ಕೇಶವನ ಚರಣ ದರ್ಶನಕೆ ನಡೆಸೆಮ್ಮ
ಯದುಕುಲೋತ್ತುಂಗ ಶೃಂಗ ಶಿಖರಾಭರಣನು ನಿನ್ನವನಲ್ತೆ ಸಖಿಯೇ
ವಿಷ್ಣುಚಿತ್ತಾತ್ಮನಿಲಯ ಚೆಲುವನಾರಾಯಣನು ತಾನೊಲಿವ ನೀನಿರಲು ನಮ್ಮೊಡನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-9-

ಭಕ್ತಿಜ್ಞಾನದ ಪರಿಮಳದ ಕಂಪಿನಾಗರ ನಿನ್ನರಮನೆಯು ಓ ಗೆಳತಿ
ಸಪ್ತಾದ್ರಿವಾಸನ ಮೈಮೆಯಲಿ ಮನ ಮರೆತಿಹೆಯೇನೇ?
ಅಣ್ಣಪುಂಡರೀಕಾಕ್ಷನೇ ಬರಲೆಂಬ ಯೋಗನಿದ್ರೆಯು ತರವಹುದೇ
ಬಂದಿಹನು ಬಾಗಿಲಿಗೆ ಶ್ರೀ ರಂಗರಂಗ ಪಾಂಡುರಂಗ ಕರವಿಟ್ಟು ಕಟಿಯಲ್ಲಿ
ಕಳೆಯೆ ಮೋಹಮದ ಮಾತ್ಸರ್ಯಗಳನೆಲ್ಲ ಏಳೆನ್ನೊಲವ ನಾದಿನಿಯೇ
ಮಾರ್ಗಶಿರದುದಯ ನೋಂಪಿಯನರುಹೆಮಗೆ ನಡೆಯೆ ಶಿಷ್ಟೇಷ್ಟ ನೆಡೆಗೆ
ಕರುಣಾಳು ಬಾ ಬೆಳಕೆ ಕೈ ಹಿಡಿದು ನಡೆಸೆಮ್ಮ ಕೇಶವನ ಚರಣದೆಡೆಗೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

-10-

ದಿನದಶವಾಯ್ತು ನಿದ್ರೆ ಧಾರೆಯನೆರೆದಿಹನೇ ಕುಂಭಕರ್ಣನು ನಿನಗೆ ?
ಮನದ ಬಾಗಿಲ ತೆರೆದೆದ್ದು ಬಾ ನುಡಿಮುತ್ತನಾಲಿಸೆಮಗೆ
ನೀನೆಮ್ಮ ವಧುಕುಲಕಲಂಕಾರ ತಾರೆ ತಾರಾಮಂಡಲಕೆ ತಾರೆ
ಸುಜ್ಞಾನ ವಾರಿಧಿಯೇ ನಡೆಸೆಮ್ಮನೊಲವಿಂದ ಅಚ್ಯುತನ ಸನ್ನಿಧಿಗೆ
ಯೋಗಿಜನ ಹೃತ್ಕಮಲವಾಸ ಸಪ್ತಾದ್ರಿವಾಸನೈದಿಹನು ನಿನಗಾಗಿ
ನಿನ್ನ ನಲ್ನುಡಿಯ ಮೆಚ್ಚಿ ನೋಂಪಿಯ ವರವೀಯಲೈದಿಹನು
ಗೀತಗೋವಿಂದ ನಂದನಂದನ ತಾನೊಲಿವ ನೀನಿರಲು ನಮ್ಮೊಡನೆ
ಫಲಿಸಲಿಂತೆಲ್ಲರನುಪಮ ನೋಂಪಿ ತುಂಬುತೆಲ್ಲೆಡೆ ಮಂಗಳದ ಮುಂಬೆಳಕು.

(ಸಶೇಷ)

# ಶ್ರೀ ಸೂಕ್ತೋಪಾಸನೆ

- ಸುಮನ ಬದರೀನಾಥ್.

ದೇವತಾರ್ಚನೆಗೆ ಮತ್ತು ಅದಕ್ಕೆ ಸಂಬಂಧಪಟ್ಟ ಪೂಜೆ, ಜಪ, ಹೋಮ, ಪಾರಾಯಣ ಮುಂತಾದ ಸಂದರ್ಭಗಳಲ್ಲಿ ವಿಶೇಷವಾಗಿ ಬಳಸಲ್ಪಡುವ ಎರಡು ಪ್ರಸಿದ್ಧ ವೇದಮಂತ್ರಗಳೆಂದರೆ ಪುರುಷಸೂಕ್ತ ಮತ್ತು ಶ್ರೀ ಸೂಕ್ತ. ಸೂಕ್ತಗಳ ರಾಜ ಎನಿಸಿದ ಪುರುಷಸೂಕ್ತ ಮಹಾವಿಷ್ಣುವಿನ ಮಹಿಮೆಯನ್ನು ಸ್ತುತಿಸಿದರೆ, ಸೂಕ್ತಗಳ ರಾಣಿ ಎನಿಸಿದ ಶ್ರೀಸೂಕ್ತ ಅವನ ಮಡದಿಯಾದ ಲಕ್ಷ್ಮೀದೇವಿಯ ವೈಭವವನ್ನು ಕೊಂಡಾಡುತ್ತದೆ. ಶ್ರೀಸೂಕ್ತಕ್ಕಿಂತಲೂ ದೇವಿಯ ಉಪಾಸನೆಯಲ್ಲಿ ಬಳಸಬಹುದಾದ ಶ್ರೇಷ್ಠ ಮಂತ್ರ ಮತ್ತೊಂದಿಲ್ಲ. ಇದು ಜಗದ್ಧಾತ್ರಿಯ, ಮಾತೃದೇವತೆಯ, ಶಕ್ತಿತ್ರಯ ಸ್ವರೂಪಿಣಿಯ ಸ್ತುತಿಯಾಗಿದೆ. ಶಕ್ತಿ ಪೂಜೆಯ ಸಂದರ್ಭದಲ್ಲಿ ಶೈವ, ವೈಷ್ಣವ, ಶಾಕ್ತ ಎಂಬ ಸಂಪ್ರದಾಯ ಭೇದವಿಲ್ಲದೆ ಈ ಸೂಕ್ತದ ವಿನಿಯೋಗವಿದೆ. ಎಲ್ಲರೂ ಯಾವುದನ್ನು ಆಶ್ರಯಿಸುವರೋ, ಬಯಸುವರೋ, ಆ ಲಕ್ಷಿ, ಆ ಚೈತನ್ಯ, ಆ ವಿಭೂತಿ - ಅದೇ ಶ್ರೀ ಎನಿಸಿದೆ. ಶ್ರೀಸೂಕ್ತದ ಶ್ರೀ ಮಂಗಳ ದೇವತೆ.

ಶ್ರೀಸೂಕ್ತವು ಋಗ್ವೇದದ ಐದನೆಯ ಮಂಡಲ ಮುಗಿದ ಮೇಲೆ, ಆರನೆಯ ಮಂಡಲ ಮೊದಲಾಗುವ ಮುನ್ನ ಬರುತ್ತದೆ. ಇದು ಖಿಲ ಸೂಕ್ತ ಎಂದರೆ ಈಗ ನಷ್ಟವಾಗಿರುವ ವೇದಶಾಖೆಯಲ್ಲಿ ಬಂದ ಸೂಕ್ತ. ವೇದಶಾಖೆಯೊಂದು ನಷ್ಟವಾಗಿ, ಅದರ ಕೆಲವು ಸೂಕ್ತಗಳು ಮಾತ್ರ ಉಳಿದುಕೊಂಡಾಗ ಅವುಗಳನ್ನು ಪ್ರಚಲಿತವಾದ ಸಂಹಿತೆಯಲ್ಲಿ ಸೇರಿಸಿಕೊಂಡರು. ಹೀಗೆ ಉಳಿದುಕೊಂಡ ಸೂಕ್ತ ಶ್ರೀಸೂಕ್ತ. ಶಾಕಲ ಸಂಹಿತೆಯ ಪರಿಶಿಷ್ಟ ಭಾಗ ಇದು. ಮೂಲ ಸಂಹಿತಾಭಾಗದಂತೆ ಈ ಪರಿಶಿಷ್ಟ ಭಾಗಕ್ಕೆ ನಿಶ್ಚಿತವಾದ ಪಾಠಪರಂಪರೆ ಇಲ್ಲ. ಶ್ರೀಸೂಕ್ತದಲ್ಲಿ ತುಂಬಾ ಪಾಠಾಂತರಗಳಿವೆ. ಶ್ರೀಸೂಕ್ತದ ಅತ್ಯಂತ ಪ್ರಾಚೀನ ಪಾಠ ಕಾಶ್ಮೀರದಲ್ಲಿ ಉಪಲಬ್ಧವಿದೆ. ಈ ಸೂಕ್ತದ ದ್ರಷ್ಟಾರನಾದ ಋಷಿಯಾರು? ಒಂದು ಸಂಪ್ರದಾಯದಂತೆ, ಶ್ರೀದೇವಿಯ ಮಕ್ಕಳಾದ, ಆನಂದ, ಕರ್ದಮ, ಚಿಕ್ಲೀತ, ಎಂಬ ಮೂವರು ಋಷಿಗಳು. ಸಮಸ್ತ ಋಗ್ವೇದದ ದ್ರಷ್ಟಾರನಾದ ಇಂದ್ರನನ್ನೂ ಈ ಸೂಕ್ತದ ಋಷಿ ಎಂದೂ ಭಾವಿಸುತ್ತಾರೆ. ಶ್ರೀಸೂಕ್ತಕ್ಕೆ ಇಬ್ಬರು ದೇವತೆಗಳು ಶ್ರೀದೇವಿ ಮತ್ತು ಅಗ್ನಿ. ಅದಕ್ಕೆಂದೆ ಜಾತವೇದ ನಾಮಕನಾದ ಅಗ್ನಿಯನ್ನು ಸಂಬೋಧಿಸಿಯೆ ಸೂಕ್ತ ಮೊದಲಾಗುತ್ತದೆ. ಜಾತವೇದ ಎಂದರೆ ಬರಿಯ ಅಗ್ನಿಯಲ್ಲ. ಅಗ್ನಿನಾರಾಯಣ. ಅದರಿಂದ ಆದಿದಂಪತಿಗಳಾದ ಲಕ್ಷ್ಮೀ ನಾರಾಯಣರು ಈ ಸೂಕ್ತದಿಂದ ಪ್ರತಿಪಾದ್ಯ ರಾದ ದೇವತೆಗಳು.

ಶ್ರೀಸೂಕ್ತದ ಮಂತ್ರಗಳ ಸಂಖ್ಯೆ 15. ಪಂಚ ದಶರ್ಚ ಎಂದೇ ಪ್ರಸಿದ್ಧಿ. ಮೊದಲ ಮೂರು ಮಂತ್ರಗಳು ಅನುಷ್ಟುಪ್ ಛಂದಸ್ಸಿನಲ್ಲಿ, ನಾಲ್ಕನೆಯದು ಪ್ರಸ್ತಾರಪಂಕ್ತಿ, ಐದು ಮತ್ತು ಆರನೆಯದು ತ್ರಿಷ್ಟುಪ್, ಏಳರಿಂದ 14 ರ ತನಕ 8 ಮಂತ್ರಗಳು ಅನುಷ್ಟುಪ್ ಹಾಗೂ 15 ನೆಯದು ಉಪರಿಷ್ಟಾದ್ ಬೃಹತಿ ಛಂದಸ್ಸುಗಳಲ್ಲೂ ಇವೆ. ಶ್ರೀಸೂಕ್ತಕ್ಕೆ ಸಾಯಣ ಭಾಷ್ಯ, ಪೃಥ್ವೀಧರ ಭಾಷ್ಯ, ನಂಜೀಯರ್ ರಚಿತ ಶ್ರೀಸೂಕ್ತ ಭಾಷ್ಯ ಮುಂತಾದ ಭಾಷ್ಯಗಳೂ, ಚಿದ್ವಿಲಾಸ ವೃತ್ತಿ, ಆಂಡವಲ್ಲೀ ವ್ಯಾಖ್ಯಾನ, ಸೂಕ್ತಾರ್ಥ ಸಂಗ್ರಹ ಮುಂತಾದ ವ್ಯಾಖ್ಯಾನಗಳೂ ಇವೆ. ಶ್ರೀಸೂಕ್ತದ 15 ಮಂತ್ರಗಳಿಗೂ ಉಪಾಸನಾಕ್ರಮ, ವಿನಿಯೋಗ, ಫಲಗಳನ್ನು ವಿವರಿಸುವ



ಮಂತ್ರಕಲ್ಪಾರ್ಣವ, ಭಾಗಧೇಯ ಭೂಷಣ ಮುಂತಾದ ಗ್ರಂಥಗಳೂ ಇವೆ. ಶ್ರೀಸೂಕ್ತೋಪಾಸಕನನ್ನು ಸಾಧನೆಯ ಮಾರ್ಗದಲ್ಲಿ ಈ ಎಲ್ಲ ಗ್ರಂಥಗಳೂ ಮುನ್ನಡೆಸುತ್ತವೆ.

ಶ್ರೀಸೂಕ್ತದಲ್ಲಿ ವರ್ಣಿತವಾಗಿರುವ ದೇವಿಯ ರೂಪ ಬಂಗಾರದ ಪುತ್ಥಳಿಯಂತೆ ಅತ್ಯಂತ ಶ್ರೇಷ್ಠವೂ, ಆಕರ್ಷಕವೂ ಆದುದು. ಅವಳು ಸರ್ವ ಶುಭ ಲಕ್ಷಣ ಸಂಪನ್ನೆ. ಸ್ತ್ರೀ ಸೌಂದರ್ಯದ ಪರಾಕಾಷ್ಠತೆ. ದೇವತೆಗಳಲ್ಲೆಲ್ಲ ಅತ್ಯುತ್ತಮ ಸೌಂದರ್ಯ ಉಳ್ಳವಳು. ಜಿಂಕೆಯಂತೆ ಮನಸ್ಸನ್ನು ಅಪಹರಿಸುವ ಜಿಂಕೆಗಣ್ಣಿನ ಚೆಲುವೆ. ಕೆಂದಾವರೆಯಂತೆ, ಬಂಗಾರದಂತೆ ಹೊಳೆಯುವ ಮೈಬಣ್ಣದವಳು. ಚಂದ್ರನಂತೆ ಆಹ್ಲಾದಕಾರಕವಾದ ಹಿತವಾದ ಸೌಮ್ಯ ಸೌಂದರ್ಯದಿಂದ ಕಂಗೊಳಿಸುತ್ತಿರುವಂತೆಯೇ, ಬಾಲಸೂರ್ಯನಂತಹ ದಿವ್ಯಪ್ರಭೆಯಿಂದಲೂ ಪ್ರಕಾಶಿಸುತ್ತಿದ್ದಾಳೆ. ಪ್ರಜ್ವಲಿಸುತ್ತಿರುವ ಅಗ್ನಿಯಂತಹ ಉಜ್ವಲ ತೇಜಸ್ಸು ಅವಳದು. ಮುಖದಲ್ಲಿ ಪರಬ್ರಹ್ಮ ಸ್ವರೂಪಿಣಿ ಎಂದು ಸೂಚಿಸುವಂತಿರುವ, ಆನಂದವನ್ನು ಸೂಸುವ ಮುಗುಳುನಗೆ. ಅವಳು ಅಮಲ ಕಮಲ ಸಂಸ್ಥೆ. ಪರಿಶುದ್ಧತೆಗೆ, ಕಾಂತಿಗೆ, ಸಮೃದ್ಧಿಗೆ, ಉಪಾಸಕನ ಹೃದಯಕ್ಕೆ ಸಂಕೇತವಾದ ಅರಳಿದ ಕಮಲದಲ್ಲಿ ಕುಳಿತಿರುವವಳೂ, ಹಾಲ್ಗಡಲಿನಿಂದ ಹೊರಬಂದು, ದಿವ್ಯ ಗಜಗಳು ತಮ್ಮ ಸೊಂಡಿಲಿನಲ್ಲಿ ಹಿಡಿದಿರುವ ಕನಕ ಕಲಶಗಳಿಂದ ದಿವ್ಯ ಸುಗಂಧಜಲವನ್ನು ಅಭಿಷೇಕಿಸುತ್ತಿರಲು, ತೊಯ್ದ ಮೈ ಉಳ್ಳವಳು. ಕೊರಳಿನಲ್ಲಿ ಚಿನ್ನದ ಮತ್ತು ಬೆಳ್ಳಿಯ ಕಮಲದ ಮಾಲೆಗಳನ್ನು ಧರಿಸಿದ್ದಾಳೆ. ಇಂತಹ ದಿವ್ಯ ಸುಂದರ ಸ್ವರೂಪ ದೇವಿಯದು.

ಶ್ರೀಸೂಕ್ತದಲ್ಲಿ ದೇವಿಯ ಮಹಿಮೆ, ಔದಾರ್ಯ, ವೈಭವಗಳು ಬಗೆ ಬಗೆಯಾಗಿ ಬಣ್ಣಿಸಲ್ಪಟ್ಟಿವೆ. ಪರಮ ಪುರುಷನೊಡನೆ ಜಗದ್ವ್ಯಾಪಾರದ ಲೀಲೆಯಲ್ಲಿ ಕೂಡಿಕೊಂಡಿರುವ ಮೂಲ ಪ್ರಕೃತಿ, ಸಾಧಕನ ಹೃದಯದಲ್ಲಿ ಎಲ್ಲ ಅರಿವಿಗೂ ಮೂಲವಾಗಿ ನೆಲಸಿರುವವಳು, ಇಡೀ ವಿಶ್ವದ ಸೃಷ್ಟಿಗೆ ಬೀಜಸ್ವರೂಪಳು, ಮಾತಿಗೂ ಮನಸಿಗೂ ಮೀರಿದ ತತ್ತ್ವ - ಎಂದೆಲ್ಲ ಬಣ್ಣಿಸಲ್ಪಟ್ಟಿದ್ದಾಳೆ. ಜೀವನದ ಸಕಲ ದಾರಿದ್ರ್ಯಗಳನ್ನೂ ಪರಿಹರಿಸಿ ಎಲ್ಲ ಐಹಿಕ, ಪಾರಮಾರ್ಥಿಕ ಭೋಗ ಭಾಗ್ಯಗಳನ್ನು ನೀಡಬಲ್ಲ ಸಂಪದಭಿಮಾನಿ ದೇವತೆ, ಭಗವಂತನ ದಯೆಯೇ ಮೈವೆತ್ತಿ ಬಂದಂತಹವಳು. ಭಕ್ತರ ಕರೆಗೆ ಕರಗಿ ತಕ್ಷಣ ಓಗೊಡುವ ಕರುಣಾಮಯಿ. ದೇವಿಯೇ ವಿಶ್ವದ ಚೈತನ್ಯಕ್ಕೆಲ್ಲ ಮೂಲಮಾತೃಕೆ. ಸೂರ್ಯ, ಚಂದ್ರ, ಅಗ್ನಿ, ಗ್ರಹ, ನಕ್ಷತ್ರಗಳೆಲ್ಲವೂ ಅವಳ ಶಕ್ತಿಯ ಕಿಡಿಗಳೇ. ಆನಂದ ಸ್ವರೂಪನಾಗಿರುವ ಶ್ರೀ ಮಹಾವಿಷ್ಣುವಿಗೆ, ನಿತ್ಯಾವಿಯೋಗಿನಿಯಾಗಿರುವುದರಿಂದ ಪೂರ್ಣಕಾಮಳು, ನಿತ್ಯತೃಪ್ತಳು, ಆದರೂ ಭಕ್ತರು ಸಲ್ಲಿಸುವ ಪೂಜೆ ಪ್ರಾರ್ಥನಾದಿಗಳಿಂದ, ಸಂತೃಪ್ತಳಾಗಿ, ವರ, ಪ್ರಸಾದ, ಅನುಗ್ರಹಗಳಿಂದ ಭಕ್ತರ ಕಾಮನೆಗಳನ್ನೆಲ್ಲ ಪೂರ್ಣಗೊಳಿಸುವ ಭಕ್ತವತ್ಸಲೆ. ಸರ್ವ ದೇವತೆಗಳಿಂದಲೂ ತಮ್ಮ ಸಾಮರ್ಥ್ಯಗಳಿಗಾಗಿ ಸೇವಿಸಲ್ಪಟ್ಟು, ಅವರು ಮಾಡಿದ ಸೇವೆಯನ್ನು ಸ್ವೀಕರಿಸಿ, ಅವರನ್ನು ಅನುಗ್ರಹಿಸುವವಳು. ಭುಕ್ತಿ ಮುಕ್ತಿ ಫಲಪ್ರದೆ. ಜಗತ್ತೆಲ್ಲ ಹರಡಿದ ಹಿರಿಮೆ, ಮಹಿಮೆಗಳುಳ್ಳವಳು. ಅವಳದು ಉದಾರವಾದ ಮನೋವೃತ್ತಿ. ಸ್ವಯಂ ಜ್ಞಾನಾನಂದಾದಿ ಸದ್ಗುಣಗಳಿಂದ ಸದಾಪೂರ್ಣೆ. ಜ್ಞಾನದೃಷ್ಟಿ ರೂಪಿಣಿ, ಜ್ಞಾನ ಪ್ರದಾಯಿನಿ, ಮಾತೃ ದೇವತೆಯಾಗಿ ಧರ್ಮ ದಂಡವನ್ನು ಹಿಡಿದು, ನಿಯತಿಯೂ, ನಿಯಾಮಕಳೂ ಎರಡೂ ಆಗಿದ್ದಾಳೆ. ಸರ್ವ ಸಂಪತ್ಪ್ರದಾಯಿನಿ. ಸಮಸ್ತ ಪುರುಷಾರ್ಥಗಳನ್ನೂ ಈಡೇರಿಸಬಲ್ಲ ಮಹಾಶಕ್ತಿ. ಪರಮ ಪವಿತ್ರಳೂ, ದೇವತೆಗಳಲ್ಲೆಲ್ಲ ಅತ್ಯುತ್ತಮಳು. ಯಶಸ್ಸು, ಸಮೃದ್ಧಿ, ಮನದ ಎಲ್ಲ ಬಯಕೆಗಳು, ವಾಕ್‌ಸಿದ್ಧಿ, ಅಖಿಲ ಭೋಗಭಾಗ್ಯಗಳು, ಎಲ್ಲವೂ ದೇವಿಯ ಉಪಾಸಕನಿಗೆ ಸುಲಭ. ಸಕಲ ಸದ್ಗುಣಗಳ ಯಶಸ್ಸಿನಿಂದ ಕಂಗೊಳಿಸುತ್ತಾ, ಪರಾಶಕ್ತಿ ಸ್ವರೂಪಿಣಿಯಾದ ದೇವಿಯದೇ ಸ್ತುತಿ ಈ ಶ್ರೀಸೂಕ್ತ.

ಶ್ರೀಸೂಕ್ತದ ಉದ್ದಗಲಕ್ಕೂ ಹರಡಿರುವ ಚಿಂತನೆ, ಕೋರಿಕೆ ಅಲಕ್ಷ್ಮಿಯ ನಿರ್ಗಮನ ಹಾಗೂ ಅನಪಗಾಮಿನಿಯಾದ ಲಕ್ಷ್ಮಿಯ ಆಗಮನ. ಲಕ್ಷ್ಮಿಯು ಇದ್ದಲ್ಲಿ ಅಲಕ್ಷ್ಮಿಯಯಿರಲಾರಳು. ಲಕ್ಷ್ಮಿಯು ಸೌಂದರ್ಯಕ್ಕೆ, ಸಮೃದ್ಧಿಗೆ, ಔದಾರ್ಯಕ್ಕೆ ಸಂಕೇತವಾದರೆ ಅಲಕ್ಷ್ಮಿಯು ಕುರೂಪಕ್ಕೆ, ಕೊರತೆಗೆ, ಕಾರ್ಪಣ್ಯಕ್ಕೆ ಸಂಕೇತ. ಇವಳು ಶ್ರೀ ಆದರೆ ಅವಳು ಅಶ್ರೀ. ಸೂಕ್ತದ 5,6 ಮತ್ತು 8 ನೆಯ ಮಂತ್ರಗಳಲ್ಲಿ ನಾವು ಅಲಕ್ಷ್ಮಿಯ ನಿರ್ಗಮನಕ್ಕಾಗಿ, ಸಾಧಕನು ದೇವಿಯನ್ನು ಬೇಡಿಕೊಳ್ಳುವುದನ್ನು ಕಾಣುತ್ತೇವೆ. ಕಲಹಪ್ರೀತಿ, ಕ್ರೌರ್ಯ, ಕಾರ್ಪಣ್ಯ, ಅಧರ್ಮ ಮುಂತಾದ ದುರ್ಗುಣಗಳನ್ನು ತ್ಯಜಿಸಿ; ಶಾಂತಿ, ಉತ್ಸಾಹ, ಕಾರುಣ್ಯ, ಔದಾರ್ಯ, ಧರ್ಮಪ್ರೀತಿ, ಮುಂತಾದ ಸದ್ಗುಣಗಳನ್ನು ಮೈಗೂಡಿಸಿಕೊಂಡು, ದೇವಿಯನ್ನು ಶರಣು ಹೋಗುವುದೇ ಲಕ್ಷ್ಮಿಯ ಆಗಮನಕ್ಕೆ ಮೊದಲ ಸಿದ್ಧತೆ. 6 ನೆಯ ಮಂತ್ರದಲ್ಲಿ ಉಕ್ತವಾಗಿರುವ ಬಿಲ್ವಫಲಗಳು ಲಕ್ಷ್ಮೀಕಟಾಕ್ಷವನ್ನೂ, ಅನುಗ್ರಹವನ್ನೂ ಪ್ರತಿನಿಧಿಸಿ, ಅದರ ಪ್ರಭಾವದಿಂದ, ಮನದೊಳಗಿನ ಅಜ್ಞಾನ. ಕಾಮ ಮುಂತಾದ ಅಂತರಂಗದ ದೋಷಗಳೂ, ದಾರಿದ್ರ್ಯ, ದೈನ್ಯ, ರೋಗ ಮುಂತಾದ ಹೊರಗಿನ ದೋಷಗಳೂ, ಪರಿಹಾರ ಗೊಳ್ಳುವುದನ್ನು ಸೂಚಿಸುತ್ತವೆ. 6 ನೆಯ ಮಂತ್ರವಾದ 'ಆದಿತ್ಯವರ್ಣೇ' ಎಂಬ ಮಂತ್ರಜಪದಿಂದ ಸಕಲೈಶ್ವರ್ಯ, ಭೋಗ ಭಾಗ್ಯಾಭಿವೃದ್ಧಿ ಉಂಟಾಗಿ, ಅಜ್ಞಾನಕ್ಕೆ, ಅಹಂಕಾರಕ್ಕೆ, ಬುದ್ಧಿಗೆ, ಸಂಬಂಧ ಪಟ್ಟ, ಎಲ್ಲ ದೌರ್ಭಾಗ್ಯಗಳೂ, ದೇಹಕ್ಕೆ ಹಾಗೂ ವ್ಯಕ್ತಿಯ ಪರಿಸರಕ್ಕೆ ಸಂಬಂಧಿಸಿದ ಎಲ್ಲ ಕಷ್ಟಗಳೂ ತೊಲಗುತ್ತವೆ. 8 ನೆಯ ಮಂತ್ರವಾದ 'ಕ್ಷುತ್ಪಿಪಾಸಾಂ' ಎಂಬುದು ಅಲಕ್ಷ್ಮಿಯ ನಾಶವನ್ನೂ, ನಿರ್ಗಮನವನ್ನೂ ಹೇಳುತ್ತದೆ. 'ಕ್ಷುತ್ಪಿಪಾಸಾಂ' ಎಂಬುದು ದೈಹಿಕವಾದ ಎಲ್ಲ ಬಾಧೆಗಳನ್ನೂ ಸೂಚಿಸಿದರೆ, ಅಭೂತಿ ಎಂದರೆ ಅನೈಶ್ವರ್ಯ, ವಿನಾಶ, ಅಸಮೃದ್ಧಿ ಎಂದರೆ, ಏಳಿಗೆ - ಅಭಿವೃದ್ಧಿ ಇಲ್ಲದಿರುವುದು, ಕೊರತೆ ಇರುವುದು, ಅಮಂಗಳ ದೇವತೆಯ ಈ ಎಲ್ಲ ಪರಿವಾರವೂ, ಸಂಕೇತಗಳೂ, ಲಕ್ಷಣಗಳೂ, ಮನೆಮನಗಳಿಂದ ಹೊರಬೀಳುವುದು, ಶಾಶ್ವತವಾಗಿ ದೂರ ಸರಿಯುವುದೇ ಈ ಮಂತ್ರ ಜಪದ ಫಲ ಎಂದು ಹೇಳಲಾಗಿದೆ.

ಶ್ರೀಸೂಕ್ತವು ಶ್ರೀತತ್ತ್ವಕ್ಕೆ ಸಂಬಂಧಿಸಿದ ಚಿಂತನೆಗಳಿಗೆಲ್ಲ ಮಾತೃಕಾಪ್ರಾಯವಾಗಿದೆ. ಸಾಧಕನ ಸಾಧನೆಗೆ, ಸಿದ್ಧಿಗೆ, ಅರಿವಿಗೆ ಅನುಗುಣವಾಗಿ ಶ್ರೀಸೂಕ್ತದ ಅರ್ಥಗಳು ವಿಧ ವಿಧವಾಗಿ, ಹೊಸ ಹೊಸದಾಗಿ ಗೋಚರವಾಗುತ್ತಲೇ ಇರುತ್ತವೆ.

ತ್ರಿಗುಣಾತ್ಮಿಕೆಯೂ, ತ್ರಿಗುಣಾತೀತಳೂ ಆದ ಲಕ್ಷ್ಮೀದೇವಿ, ಸತ್ತ್ವ, ರಜೋ, ತಮೋ ಗುಣಗಳ ಅಭಿಮಾನಿಯಾಗಿ, ಶ್ರೀ, ಭೂ, ದುರ್ಗಾ, ತುಲಸೀ ಎಲ್ಲರೂ ಲಕ್ಷ್ಮಿಯ ಅಂಶಾವತಾರಗಳೆಂದು ಹೇಳಿದೆ. ಭೂದೇವಿಯು ಸಹನಶೀಲೆ. ತನ್ನ ಮಕ್ಕಳು (ಭೂಮಿಯ ಮೇಲೆ ಜನ್ಮ ತಾಳಿದ ಎಲ್ಲ ಜೀವಿಗಳು) ಮಾಡಿದ ತಪ್ಪುಗಳನ್ನೆಲ್ಲ ತಾಳಿಕೊಂಡು, ಅವರನ್ನು ಕ್ಷಮಿಸಿ, ಅವರಿಗೆ ಮತ್ತೂ ಉತ್ಕರ್ಷವನ್ನು ಉಂಟುಮಾಡುವ ದಯಾಮಯಿ. ಸದಾ ಸಮೃದ್ಧವಾದ ಸಸ್ಯ ಸಂಪತ್ತು, ಹಾಗೂ ಪಶು ಸಂಪತ್ತಿನಿಂದ ಕೂಡಿರುವ ನಿತ್ಯಪುಷ್ಟೆ. ಮಂಗಳ ಪ್ರದಾತ್ರಿಯಾದ ದೇವಿಯ ಈ ಭೂರೂಪದ ಸ್ತುತಿಯಿಂದ, ಈ ಮಂತ್ರ ಪಠನೆ, ಜಪಗಳಿಂದ, ಕೃಷಿಯಲ್ಲಿ ಉತ್ತಮ ಫಲ, ಧನ ಧಾನ್ಯ ಪಶು ಸಮೃದ್ಧಿ ಉಂಟಾಗುವುದೆಂದು ಹೇಳಲಾಗಿದೆ. ಈ ಸೂಕ್ತ ಪ್ರಮುಖವಾಗಿ ಲಕ್ಷ್ಮಿಯ ಶ್ರೀರೂಪದ ಸ್ತುತಿ. ಶ್ರೀಸೂಕ್ತದ ಶ್ರೀ - ಮಂಗಳದೇವತೆ. ಶ್ರೀ ಎಂದರೆ ಶ್ರೇಯಸ್ಸಿಗೆ ಕಾರಣವಾದದ್ದು. ಚೆಲುವಿಗೆ, ಸಂಪತ್ತಿಗೆ, ವಿಭೂತಿಗೆ, ಕಾಂತಿಗೆ ಸಂಕೇತ, ಶ್ರೀ ಎನ್ನುವ ಪದಕ್ಕೆ, ವಿಸ್ತಾರವಾದ, ಯೌಗಿಕಾರ್ಥಗಳಿದ್ದು, ಅವು ಗ್ರಂಥಗಳಲ್ಲಿ, ಬಹುತೆರವಾಗಿ ವ್ಯಾಖ್ಯಾನಿಸಲ್ಪಟ್ಟಿದೆ. ದೇವಿಯು ಹಿರಣ್ಯವರ್ಣಾ, ಸುವರ್ಣ ರಜತ ಸ್ರಜಾ, ಹಿರಣ್ಯಪ್ರಾಕಾರಾ, ಶ್ರೀ, ಹಿರಣ್ಮಯೀ, ಹೇಮಮಾಲಿನೀ ಎನಿಸಿ ಸಕಲ ವಿಧವಾದ ಸಂಪತ್ತುಗಳನ್ನೂ, ಭೋಗಭಾಗ್ಯಗಳನ್ನೂ ನೀಡುವವಳಾಗಿದ್ದಾಳೆ. ಅವಳು ನೀಡದ ನೀಡಲಾರದ ಒಳಿತು ಯಾವುದೂ ಇಲ್ಲವೇ ಇಲ್ಲ. ಅದೂ ಉದಾರವಾಗಿ ನೀಡುತ್ತಾಳೆ. ಅದಕ್ಕಾಗಿಯೇ ಅವಳು ಎಲ್ಲರಿಂದಲೂ ಆಶ್ರಯಿಸಲ್ಪಟ್ಟಿದ್ದಾಳೆ. ಈ ಜನ್ಮದಲ್ಲೂ ಇಂಗದ ಸಂಪತ್ತು, ಜನ್ಮಾಂತರದಲ್ಲಿಯೂ ಸ್ಥಿರವಾದ ಐಶ್ವರ್ಯ, ದೇವಿಯ ಕೃಪೆ. ಅವಳು ಸಕಲೈಶ್ವರ್ಯಸಂಪನ್ನೆ. ಸಕಲೈಶ್ವರ್ಯ ದಾನಶೀಲೆ. ಶ್ರಿಯಃ ಪಂಚದಶರ್ಚಂಚ ಶ್ರೀಕಾಮ ಸ್ಸತತಂ ಜಪೇತ್ - ಎಂದು ಸೂಕ್ತದ ಫಲಶ್ರುತಿಯಲ್ಲಿ ಹೇಳಲ್ಪಟ್ಟಿದೆ. ಈ ಸೂಕ್ತದ ಉಪಾಸನೆಯಿಂದ ನಿರಂತರ ಲಕ್ಷ್ಮೀಕಟಾಕ್ಷ ಪ್ರಾಪ್ತವಾಗುವುದರಲ್ಲಿ ಸಂದೇಹವೇ ಇಲ್ಲ.

ದೇವಿಯು ಸರ್ವ ಸಂಪತ್ತುಗಳ ಅದಿದೇವತೆ. ಈ ಎಲ್ಲ ಸಂಪತ್ತುಗಳನ್ನೂ, ಎಂಟು ಬಗೆಯ ಸಂಪತ್ತುಗಳು ಒಳಗೊಂಡಿರುವವೆಂದೂ ಗುರುತಿಸಿ, ದೇವಿಯು ಅಷ್ಟೈಶ್ವರ್ಯರೂಪಿಣಿ ಎಂದು ಭಾವಿಸಿ, ಅಷ್ಟಲಕ್ಷ್ಮೀ ಎಂದು ಅಷ್ಟರೂಪಗಳಲ್ಲಿ ಆರಾಧಿಸಲ್ಪಟ್ಟಿದ್ದಾಳೆ. ಅವಳ ಗಜಲಕ್ಷ್ಮಿ, ಸಂತಾನಲಕ್ಷ್ಮಿ, ಧಾನ್ಯಲಕ್ಷ್ಮಿ, ವಿಜಯಲಕ್ಷ್ಮಿ ಹಾಗೂ ಧನಲಕ್ಷ್ಮೀರೂಪಗಳು ಶ್ರೀಸೂಕ್ತದಲ್ಲಿ ವಿಶೇಷವಾಗಿ ಸ್ತುತಿಸಲ್ಪಟ್ಟಿವೆ. 'ಆರ್ದ್ರಾಂ ಪುಷ್ಕರಿಣೀಂ' ಎಂಬ 13 ಮತ್ತು 14 ನೆಯ ಮಂತ್ರದಲ್ಲಿ ದೇವಿಯ ಗಜಲಕ್ಷ್ಮೀ ರೂಪದ ವೈಭವವೂ, ಉಪಾಸನೆಯೂ ಹೇಳಲ್ಪಟ್ಟಿದೆ. ಮದ - ಮಮಕಾರಗಳ ಅಭಿಮಾನೀ ದೇವತೆಗಳು ದಿವ್ಯಗಜರೂಪವನ್ನು ಧರಿಸಿ, ಆಶಾಪ್ರೀತಿಗಳೆಂಬ ಸುವರ್ಣಕಲಶಗಳನ್ನು ಸೊಂಡಿಲ ತುದಿಯಿಂದ ಹಿಡಿದು. ತೃಪ್ತಿ ಎಂಬ ಅಮೃತಧಾರೆಯಿಂದ ಹೃತ್ಪದ್ಮವಾಸಿನಿಯೂ, ಚಿದ್ರೂಪಿಣಿಯೂ ಆದ ಶ್ರೀದೇವಿಯನ್ನು ಅಭಿಷೇಕ ಮಾಡುತ್ತಿವೆ ಎಂದು ಬಣ್ಣಿಸಲಾಗಿದೆ. ಹಾಗೆಯೇ ಎಂಟೂ ದಿಕ್ಕುಗಳಲ್ಲಿ ಆಧಾರವಾಗಿ ಜಗತ್ತನ್ನು ಎತ್ತಿ ಹಿಡಿದಿರುವ ದಿಗ್ಗಜಗಳು ದಿವ್ಯ ಸುಗಂಧಜಲದಿಂದ ಮಜ್ಜನಮಾಡಿಸುತ್ತಿವೆ ಎಂದೂ ಹೇಳಲಾಗಿದೆ. ಈ ಮಂತ್ರಗಳಿಂದ ದೇವಿಯ ಗಜಲಕ್ಷ್ಮೀರೂಪವನ್ನು ಆರಾಧಿಸಿದರೆ ಗಜಾಂತವಾದ ಐಶ್ವರ್ಯವೂ, ಸಕಲ ಭೋಗ ಭಾಗ್ಯಗಳೂ ದೊರೆಯುವುದೆಂದು ಮಂತ್ರ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿದೆ. 'ಕರ್ದಮೇನ ಪ್ರಜಾಭೂತಾ' ಮತ್ತು 'ಆಪಃ ಸೃಜಂತು ಸ್ನಿಗ್ಧಾನಿ' ಎಂಬ 11 ಮತ್ತು 12 ನೆಯ ಮಂತ್ರಗಳು ಸಂತಾನ ಲಕ್ಷ್ಮೀ ಮಂತ್ರಗಳಾಗಿವೆ. ಇಲ್ಲಿ ಕರ್ದಮ ಮತ್ತು ಚಿಕ್ಲೀತರ ತಾಯಿಯೆಂದು ಸಂಬೋಧಿಸಿದ್ದರೂ, ಅವಳು ಕರ್ದಮ ಮತ್ತು ಚಿಕ್ಲೀತರಿಗೆ ಮಾತ್ರ ತಾಯಿಯಲ್ಲ. ಅವಳು ಭುವನಮಾತೆ. ಇಡೀ ವಿಶ್ವಕ್ಕೆ ಮೂಲ ಸ್ವರೂಪಳಾದ ಮೂಲಪ್ರಕೃತಿ. ಎಲ್ಲ ಮಾತೃದೇವತೆಗಳ ಪ್ರತಿಪಾದ್ಯೆ. ತಾಯಿಯು ಹೇಗೆ ಮಕ್ಕಳಿಗೆ ಸದಾ ಒಳಿತನ್ನೇ ಮಾಡುವಳೋ, ಅವರ ಎಲ್ಲ ಬಯಕೆಗಳನ್ನು ಈಡೇರಿಸುವಳೋ, ಹಾಗೇ ದೇವಿಯೂ. ಈ ಮಂತ್ರಗಳು ಸಂತಾನ ಸೌಭಾಗ್ಯ ಪ್ರದವಾದುವು. ಅವಿಚ್ಛಿನ್ನವಾದ ಸತ್ಸಂತಾನವು ಲಭಿಸಿ ವಂಶದ ಮೇಲೆ ಲಕ್ಷ್ಮೀ ಕೃಪೆ ಶಾಶ್ವತವಾಗಿರುವುದು ಎಂದು ಹೇಳಲಾಗಿದೆ. 'ಅಶ್ವಪೂರ್ವಾಂ ರಥಮಧ್ಯಾಂ' ಎಂಬ 3 ನೆಯ ಮಂತ್ರದಲ್ಲಿ ದೇವಿಯ ವಿಜಯಲಕ್ಷ್ಮೀ ಸ್ವರೂಪವು ವಿಶೇಷವಾಗಿ ಸ್ತುತಿಸಲ್ಪಟ್ಟಿದೆ. ಇದರಲ್ಲಿ ವಿಜಯಲಕ್ಷ್ಮಿಯು ಮಹಾಸಂಭ್ರಮದಿಂದ ಹಾಗೂ ದಿವ್ಯ ವೈಭವದಿಂದ ಸಾಧಕನೆಡೆಗೆ



ಬರುತ್ತಿರುವ ಚಿತ್ರಣವಿದೆ. ಅವಳ ಮೆರವಣಿಗೆಯಲ್ಲಿ ಮೊದಲಸಾಲು ಕುದುರೆಗಳದ್ದು. ಅವುಗಳ ಹಿಂದೆ ರಥಗಳ ಸಮೂಹ, ದಿವ್ಯರಥದಲ್ಲಿ ದೇವಿಯು ವಿರಾಜಿಸುತ್ತಿದ್ದಾಳೆ. ದೇವಿಯ ಮುಂಭಾಗದಲ್ಲಿ ಅವಳ ಬರವನ್ನು ಸಾರುತ್ತಾ, ಆನೆಗಳು ಗಟ್ಟಿಯಾಗಿ ಘೀಳಿಡುತ್ತಾ ಸಾಗುತ್ತಿವೆ. ಇಂಥ ಸೇನಾಪರಿವಾರದೊಡನೆ ಅಸುರ ಸಂಹಾರಕ್ಕೆಂದು ವಿಜಯಯಾತ್ರೆ ಹೊರಟ ಜಯಲಕ್ಷ್ಮಿ ಇವಳು. ಈ ಮಂತ್ರ ಜಪದ ಮಹಿಮೆಯಿಂದ ಉಪಾಸಕನು ಹಗೆಗಳನ್ನು ಜಯಿಸಿ, ಚತುರಂಗಬಲ ಸಮೃದ್ಧವಾದ ರಾಜ್ಯವನ್ನು ಪಡೆದು ಸುಖಿಸುವನು ಎನ್ನಲಾಗಿದೆ. ಗಂಧದ್ವಾರಾಂ ಎಂಬ 9 ನೆಯ ಮಂತ್ರದಲ್ಲಿ ಧಾನ್ಯಲಕ್ಷ್ಮೀದೇವಿಯ ಸ್ತೋತ್ರವಿದೆ. ಧಾನ್ಯ, ಪಶು ಮುಂತಾದವುಗಳಿಂದ ನಿತ್ಯ ಪುಷ್ಟೆಯೂ, ಸಸ್ಯ ಸಮೃದ್ಧಿಯಿಂದ ಸದಾ ಕೂಡಿರುವವಳೂ. ಅನ್ನವೆಂದರೆ - ಯಥೇಚ್ಛವಾಗಿ ಆಹಾರವನ್ನು ನೀಡುವವಳೂ, ಸಸ್ಯಾದಿಗಳಿಂದ ನಮ್ಮನ್ನು ಅನುಗಾಲವೂ ಪೋಷಿಸುವವಳೂ ಆದ ದೇವಿಯ ರೂಪವಿದು. ಅವಳ ಅನುಗ್ರಹದಿಂದಲೇ ಜೀವಿಗಳಿಗೆ ಅನ್ನಪೋಷಣೆ. ಈ ಮಂತ್ರಜಪದಿಂದ ವ್ಯವಸಾಯದಲ್ಲಿ ಉತ್ತಮಫಲ, ಧಾನ್ಯ, ಪಶುಸಮೃದ್ಧಿ ಉಂಟಾಗುವುದೆಂದು ಹೇಳುತ್ತಾರೆ. ಶ್ರೀಸೂಕ್ತದ ಉದ್ದಕ್ಕೂ ಧನಲಕ್ಷ್ಮೀರೂಪದ ಸ್ತುತಿ ಇದೆ. ಶ್ರೀ ಎಂದರೆ ಸಂಪತ್ತು, ಭಾಗ್ಯ. ಧನವೆಂದರೆ ಕೇವಲ ಹಣವಲ್ಲ, ಎಲ್ಲ ಬಗೆಯ ಲೌಕಿಕ ಸಂಪತ್ತುಗಳು ದೇವಿಯ ಕೃಪಾ ಕಟಾಕ್ಷದಿಂದ ಲಭ್ಯ. ಸೂಕ್ತದ ಕಡೆಯ ಎಂದರೆ 15 ನೆಯ ಮಂತ್ರಜಪ ಐಹಿಕವಾದ ಸಕಲ ಕಾಮನೆಗಳಿಗೂ ಕಲ್ಪವೃಕ್ಷ ಎಂದಿದ್ದಾರೆ. ಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರನಾದವನನ್ನು ಕುಬೇರನು ಅನುಚರನಂತೆ ಅನುಸರಿಸುತ್ತಾನೆ. ಧನಲಕ್ಷ್ಮೀ ರೂಪಿಣಿಯಾದ ದೇವಿಯು ಅಂತಹವರ ಮನೆಯಲ್ಲಿ ಸ್ಥಿರವಾಗಿ ನೆಲೆಸುತ್ತಾಳೆ ಎನ್ನಲಾಗಿದೆ.

ಈ ಜಗತ್ತು ಪಂಚಭೂತಾತ್ಮಕವಾದುದು. ಈ ಜಗತ್ತಿಗೆ ಒಡತಿಯೂ ನಿಯಾಮಕಳೂ ಆದ ಲಕ್ಷ್ಮೀದೇವಿಯು ಪಂಚಭೂತ ತತ್ತ್ವಗಳಿಗೂ ಅಭಿಮಾನೀ ದೇವತೆಯಾಗಿದ್ದಾಳೆ. ಪೃಥ್ವೀತತ್ತ್ವ, ಅಪ್‌ತತ್ತ್ವ, ಹಾಗೂ ತೇಜೋತತ್ತ್ವಗಳ ಅವಳ ಅಭಿಮಾನೀರೂಪಗಳು. ಶ್ರೀಸೂಕ್ತದಲ್ಲಿ ವಿಶೇಷವಾಗಿ ಸ್ತುತಿಸಲ್ಪಟ್ಟಿವೆ. 'ಗಂಧದ್ವಾರಾಂ' ಎಂಬ 9 ನೆಯ ಮಂತ್ರವು, ದೇವಿಯ ಪೃಥ್ವೀತತ್ತ್ವಾಭಿಮಾನಿ ರೂಪವನ್ನು ಸ್ತುತಿಸುತ್ತದೆ. ಮಹಾಲಕ್ಷ್ಮಿಯು ಭೂರೂಪದಲ್ಲಿರುವವಳು. ಗಂಧವು ಪೃಥ್ವೀತತ್ತ್ವದ ಗುಣವಿಶೇಷ. ಅದಕ್ಕೆ ಬಾಗಿಲಿನಂತಿರುವವಳು. ಆದರಿಂದ 'ಗಂಧದ್ವಾರಾಂ' ಎನಿಸಿದ್ದಾಳೆ. ಧುರಾಧರ್ಷೆ, ಕ್ಷಮೆ, ತಾಳ್ಮೆ, ಸಹನೆಗಳ ಮೂರ್ತಿಮಂತ ಸ್ವರೂಪಿಣಿ ಹಾಗೂ ನಿತ್ಯಪುಷ್ಟೆ. ಜೀವಿಗೆ ಬೇಕಾದ ಪಾಲನೆ, ಪೋಷಣೆ, ವೃದ್ಧಿ ಎಲ್ಲಕ್ಕೂ ಅವಳೇ ಮೂಲ ಮಾತೃಕೆ. ಸಸ್ಯ ಸಂಪತ್ತು, ಪಶುಸಂಪತ್ತುಗಳಿಂದ ಸರ್ವದಾಸತ್ವ ಪೂರ್ಣೆ. ಸಸ್ಯಸಮೃದ್ಧಿ ಪಶುಸಮೃದ್ಧಿಗಳು ಭೂದೇವಿಯ ವೈಶಿಷ್ಟ್ಯ. ಸಕಲ ಜೀವಿಗಳಿಗೂ ಆಧಾರ ಭೂತೆ. 'ಆಪಃ ಸೃಜಂತು' ಎಂಬ 12 ನೆಯ ಮಂತ್ರದಲ್ಲಿ ದೇವಿಯ ಅಪ್ ತತ್ತ್ವಾಭಿಮಾನಿ ರೂಪವು ಸ್ತುತಿಸಲ್ಪಟ್ಟಿದೆ. ಉಪಾಸಕರು ದೇವಿಯನ್ನು ಈ ಮಂತ್ರದಲ್ಲಿ ಜಲರೂಪಿಣಿ ಎಂದು ಭಾವಿಸಿ ಉಪಾಸಿಸುವರು. ಪ್ರಳಯಕಾಲದಲ್ಲಿ ಸೂಕ್ಷ್ಮ ಪ್ರಕೃತಿ ನೀರಿನ ರೂಪದಲ್ಲಿರುತ್ತದೆ. ನೀರೇ ಎಲ್ಲಕ್ಕೂ ಮೊದಲಿರುವುದು. ನೀರಿನಿಂದಲೆ ವಿಶ್ವದ ಸೃಷ್ಟಿ ಆದರಿಂದ ಮೂಲ ಪ್ರಕೃತಿ ಎನಿಸಿದ ಲಕ್ಷ್ಮಿಯೆ ಅಪ್‌ದೇವತೆ. ಸೃಷ್ಟಿಯ ಪೂರ್ವದಲ್ಲಿ ಕಡಲ ನೀರಾಗಿ ಭಗವಂತನ ಲೀಲೆಗೆ ಅನುವು ಮಾಡಿಕೊಡುವವಳು ಜಲಸ್ವರೂಪಳಾದ ಲಕ್ಷ್ಮೀದೇವಿಯೇ. ಶ್ರೀದೇವಿಯ ಅನುಗ್ರಹವೆ ನೀರಿನ ತತ್ತ್ವ. ಅವಳ ಕರುಣೆಯಿಂದ ಜೀವನದಲ್ಲಿ ಸ್ನಿಗ್ಧತೆ ಮತ್ತು ಸ್ನೇಹತ್ವಗಳು ವೃದ್ಧಿಗೊಳ್ಳುವುವು. ತೇಜೋ ತತ್ತ್ವವು ಪ್ರಕೃತಿಯಲ್ಲಿ ಸೂರ್ಯಾಚಂದ್ರಾಗ್ನಿಗಳ ರೂಪದಲ್ಲಿ ಪ್ರಕಟಿತಗೊಂಡಿದೆ. ಲಕ್ಷ್ಮೀದೇವಿಯು ಸೂರ್ಯಾಚಂದ್ರಾಗ್ನಿರೂಪಳು. ಚಂದ್ರ ಸೂರ್ಯಾಗ್ನಿಗಳಿಗೆ ಕಾಂತಿ, ಪ್ರಕಾಶ, ತೇಜಸ್ಸುಗಳನ್ನು ದಯಪಾಲಿಸುವವಳು ಅವಳೇ. ದೇವಿಯಮುಖ ಪೂರ್ಣ ಚಂದ್ರನಂತೆ ಚೆಲುವಾಗಿದೆ. 'ಚಂದ್ರಾಂ' ಎಂದು ಸ್ತುತಿಸಲ್ಪಟ್ಟು ಚಂದ್ರರೂಪದಿಂದ, ಅಮೃತಕಿರಣಗಳಿಂದ, ಲೋಕಾಹ್ಲಾದಕಾರಿಣಿ, ಬೆಳದಿಂಗಳಿನಂತೆ ಮನವರಳಿಸುವ ತಂಪು ನೀಡುವ ಅತಿಶಯ ಕಾಂತಿ ಪೂರ್ಣೆ. ಚಂದ್ರನಲ್ಲಿರುವ ಪ್ರಕೃಷ್ಟವಾದ ಬೆಳಕು ದೇವಿಯದೇ ತೇಜಸ್ಸು. ಚಂದ್ರನ 15 ಕಲೆಗಳು ದೇವಿಯ ಪಂಚದಶ ಪ್ರಕಾರಗಳು. ಈ ಸೂಕ್ತದ ಮಂತ್ರಗಳನ್ನು ಜಪಿಸುವಾಗ ಚಂದ್ರಬಿಂಬದಲ್ಲಿ ದೇವಿಯನ್ನು ಭಾವಿಸಿ ಪೂಜಿಸುವುದುಂಟು. ದೇವಿಯು ಆದಿತ್ಯವರ್ಣೆ. ಬಾಲಸೂರ್ಯನಂತೆ ಬೆಳಗುವ ದೇಹಕಾಂತಿ ಉಳ್ಳವಳು. ಸೂರ್ಯಮಂಡಲದಲ್ಲಿ ನೆಲಸಿ ಸೂರ್ಯನಿಗೆ ಪ್ರಕಾಶತ್ವವನ್ನು ದಯಪಾಲಿಸಿ, ಸೂರ್ಯರೂಪದಿಂದ ಜಗತ್ತಿಗೆ ಚೈತನ್ಯ ದಾಯಿನಿಯಾಗಿರುವವಳು. ಆದರ ಆಗುಹೋಗುಗಳಿಗೆಲ್ಲ ಕಾರಣಭೂತೆ. ಸೂರ್ಯನಾರಾಯಣನ ಮಡದಿಯಾಗಿ ಸೂರ್ಯನಲ್ಲಿ ಸನ್ನಿಹಿತಳಾಗಿ 'ಸೂರ್ಯಾಂ' ಎಂದು ಸ್ತುತಿಸಲ್ಪಟ್ಟವಳು. ಸೂರ್ಯಮಂಡಲದಲ್ಲಿ ಲಕ್ಷ್ಮಿಯನ್ನು ಆವಾಹಿಸಿ ಪೂಜಿಸುವ ವಿಧಾನವೂ ಇದೆ. ಇನ್ನು ಅಗ್ನಿನಾಮಕನಾದ ವಿಷ್ಣುವಿನ ಸಂಪತ್ತು ಶೋಭೆ, ಕಾಂತಿ, ವೈಭವ ಎಲ್ಲವೂ ಶ್ರೀ ಎಂದೇ ಹೇಳಲ್ಪಟ್ಟಿದೆ. ಅವಳು ಅಗ್ನಿನಾರಾಯಣನ ಮಡದಿ. ಈ ಸೂಕ್ತದಲ್ಲಿ ಅಗ್ನಿಗೂ ಶ್ರೀಗೂ ಅಭೇದತ್ವವಿದೆ. ಸುವರ್ಣವು ಅಗ್ನಿಯ ತೇಜಸ್ಸು. ದೇವಿಯು ಹಿರಣ್ಯವರ್ಣೆ. ಹಿರಣ್ಯಪ್ರಾಕಾರಾ, ಹಿರಣ್ಮಯೀ ಎಂಬ ನಾಮಗಳನ್ನು ಉಳ್ಳವಳು. ಉರಿಯ ಬೆಳಕಿನಂತೆ ಕಂಗೊಳಿಸುತ್ತಿರುವವಳು. ಅಗ್ನಿಯು ಅವಳ ಅನುಗ್ರಹದಿಂದಲೇ ಐಶ್ವರ್ಯಪ್ರದ ಶಕ್ತಿಯನ್ನು ಹೊಂದಿರುತ್ತಾನೆ. ಹೀಗಾಗಿ ಅಗ್ನಿಯೂ ಅವಳ ತೇಜಸ್ಸಿನ ಒಂದು ರೂಪವೇ.

ಹೀಗಾಗಿ ಈ ಸೂಕ್ತವು ಲಕ್ಷ್ಮೀದೇವಿಯ ಅನಂತ ಮಹಿಮೆ ಹಾಗೂ ದಿವ್ಯ ವೈಭವಗಳ ಶಬ್ದರೂಪವೇ ಆಗಿದೆ. ಇದರ ಜಪ ಪೂಜೆ, ಮನನ, ಹೋಮ, ಪಾರಾಯಣಾದಿಗಳು, ದೇವಿಯ ಆರಾಧನೆಯೇ ಆಗಿದ್ದು ಅವಳ ಕ್ಷಿಪ್ರ ಪ್ರಸಾದವನ್ನು ಪಡೆಯುವಲ್ಲಿ ನೆರವಾಗಬಲ್ಲುದು.

★★★★★

# ದಿವ್ಯಪ್ರಬಂಧಗಳ ಏಕೈಕ ಸುಪ್ರಭಾತ

- ಎಂ. ಆರ್. ನರಸಿಂಹನ್.

ಸುಪ್ರಭಾತ ಎಂದ ತಕ್ಷಣ ನಮ್ಮ ನೆನಪಿಗೆ ಬರುವುದು ವೆಂಕಟೇಶ್ವರ ಸುಪ್ರಭಾತ. ತಿರುಮಲೆ ತಿರುಪತಿ ದೇವಸ್ಥಾನದವರು ಈ ಸ್ತೋತ್ರಕ್ಕೆ ವಿಶೇಷ ಪ್ರಚಾರ ನೀಡಿದರು. ಸಂಗೀತ ವಿದುಷಿ ಎಂ. ಎಸ್. ಸುಬ್ಬುಲಕ್ಷ್ಮಿ ಅವರು ತಮ್ಮ ರೆಕಾರ್ಡ್ ಮೂಲಕ ಇದನ್ನು ವಿಶ್ವಾದ್ಯಂತ ವ್ಯಾಪಿಸಿ ಜನಪ್ರಿಯವಾಗುವಂತೆ ಮಾಡಿದರು.

ಈ ಸುಪ್ರಭಾತ ಸ್ತೋತ್ರ ಸಂಸ್ಕೃತ ಭಾಷೆಯಲ್ಲಿದೆ. ಇತ್ತೀಚೆಗೆ ಈ ಸ್ತೋತ್ರದ ವಿಷಯ ವಸ್ತು ಪರಿಕರಗಳನ್ನೇ ಆಧರಿಸಿ ಅನೇಕ ದೇವ ದೇವಿಯರುಗಳ ಮೇಲೆ ಅನೇಕ ಸುಪ್ರಭಾತಗಳು ವಿದ್ವಾಂಸರುಗಳಿಂದ ಸಂಸ್ಕೃತ, ಕನ್ನಡ, ತಮಿಳು ಮತ್ತಿತರ ಭಾಷೆಗಳಲ್ಲೂ ರಚಿತಗೊಂಡು ಖ್ಯಾತಗಾಯಕ ಗಾಯಕಿಯ ರಿಂದ ಹಾಡಲ್ಪಟ್ಟು ಧ್ವನಿ ಸುರುಳಿಗಳ ಮೂಲಕ ಪ್ರಸಾರಗೊಳ್ಳುತ್ತಿರುವುದೂ ಸುವಿದಿತ ವೃತ್ತವೇ ಆಗಿದೆ.

ಉಭಯ ವೇದಾಂತವೆಂದೆನಿಸಿಕೊಳ್ಳುವ ಶ್ರೀವೈಷ್ಣವ ಸಂಪ್ರದಾಯದ ಸಾಹಿತ್ಯದಲ್ಲಿ ಸಂಸ್ಕೃತ ಮತ್ತು ತಮಿಳು ಸ್ತೋತ್ರ ಪ್ರಬಂಧಗಳಿಗೆ ಸಮಾನಸ್ಥಾನವುಂಟು. ಸಂಸ್ಕೃತ ಭಾಷೆಯಲ್ಲಿ ಖ್ಯಾತವಾಗಿರುವ ಸುಪ್ರಭಾತ ಸ್ತೋತ್ರಗಳೆಂದರೆ 1) ವೆಂಕಟೇಶ ಸುಪ್ರಭಾತ, 2) ಶ್ರೀರಂಗರಾಜ ಸುಪ್ರಭಾತ, 3)ಶ್ರೀದೇವರಾಜ ಸುಪ್ರಭಾತ, 4) ಶ್ರೀ ಯದುಗಿರೀಶ ಸುಪ್ರಭಾತ, 5) ಶ್ರೀ ಗೋವಿಂದರಾಜ ಸುಪ್ರಭಾತ, 6) ಶ್ರೀ ಪಾರ್ಥಸಾರಥಿ ಸುಪ್ರಭಾತ, 7) ಶ್ರೀ ಪರಾಂಕುಶ ಸುಪ್ರಭಾತ, 8) ಶ್ರೀ ರಾಮಾನುಜ ಸುಪ್ರಭಾತ, 9) ಶ್ರೀ ವರವರಮುನಿ ಸುಪ್ರಭಾತ. (1890 ರಲ್ಲಿ ಮದರಾಸಿನ ಶ್ರೀ ಪತ್ತಿ ವೆಂಕಟ ನಾರಾಯಣಸ್ವಾಮಿ ನಾಯುಡು ಅವರಿಂದ ತೆಲುಗು ಲಿಪಿಯಲ್ಲಿ ಪ್ರಕಟವಾಗಿರುವ ''ಸ್ತೋತ್ರಜಾಲಮ್'' ಪುಸ್ತಕದ ಪ್ರಕಾರ) ಇವುಗಳಲ್ಲಿ ಮೊದಲಿನ ನಾಲ್ಕು ಶ್ರೀವೈಷ್ಣವರ ನಾಲ್ಕು ದಿವ್ಯಕ್ಷೇತ್ರಗಳೆನಿಸಿದ ಶ್ರೀರಂಗ, ತಿರುಪತಿ, ಕಂಚಿ ಮತ್ತು ತಿರುನಾರಾಯಣಪುರ (ಮೇಲುಕೋಟೆ) ಇವುಗಳ ಅಧಿದೈವಗಳ ಮೇಲಿನವು. ಶ್ರೀ ಪರಾಂಕುಶ ಸುಪ್ರಭಾತ ಶ್ರೀವೈಷ್ಣವರ ಹಿರಿಯ ಆಳ್ವಾರ್ ನಮ್ಮಾಳ್ವಾರ್ ಅವರ ಮೇಲಿನದು. ಶ್ರೀ ರಾಮಾನುಜ ಸುಪ್ರಭಾತ ಆಚಾರ್ಯ ರಾಮಾನುಜರನ್ನು ಕುರಿತದ್ದು. ಶ್ರೀ ವರವರಮುನಿ ಸುಪ್ರಭಾತವು ಆಚಾರ್ಯ ಮಣವಾಳ ಮಹಾಮುನಿಗಳನ್ನು ಕುರಿತದ್ದು.

ಆದರೆ ಇಡೀ ಶ್ರೀವೈಷ್ಣವ ಸಾಹಿತ್ಯದಲ್ಲೆಲ್ಲಾ ನಮಗೆ ದೊರಕುವ ತಮಿಳು ಭಾಷೆಯ ಒಂದು ಸುಪ್ರಭಾತವೆಂದರೆ ತೊಂಡರಡಿಪ್ಪೊಡಿ ಆಳ್ವಾರ್ ಅವರಿಂದ ರಚಿತವಾದ ತಿರುಪ್ಪಳ್ಳಿಯಳುಚ್ಚಿ, ಶ್ರೀರಂಗದ ರಂಗನಾಥನ ಮೇಲಿನ ಏಕೈಕ ಸುಪ್ರಭಾತ. ಮತ್ತಾವುದಾದರೂ ಇದ್ದಲ್ಲಿ ಅದು ಅಪ್ರಸಿದ್ಧ! ಅಪರಿಚಿತ!

ಶ್ರೀವೈಷ್ಣವ ಸಿದ್ಧಾಂತದ ಕಾಲ ವಿಂಗಡಣೆಯ ಪ್ರಕಾರ ಸುಮಾರು 9 ನೇ ಶತಮಾನದವರೆಗೆ ಆಳ್ವಾರುಗಳ ಕಾಲ ಮತ್ತು ಸುಮಾರು 16 ನೇ ಶತಮಾನದ ವರೆಗೆ ಆಚಾರ್ಯರುಗಳ ಕಾಲ. ನಂತರ ಬಂದ ಪ್ರಖ್ಯಾತ ಆಚಾರ್ಯರು ತಮ್ಮನ್ನು ಆಚಾರ್ಯಪಂಕ್ತಿಗೆ ಸೇರಿಸುವ ಸಾಹಸಕ್ಕೆ ತೊಡಗಲಿಲ್ಲ. ಆಳ್ವಾರ್ ಪಂಕ್ತಿಯಲ್ಲಿ ತೊಂಡರಡಿಪ್ಪೊಡಿ ಆಳ್ವಾರ್ ಕಡೆಯವರು ಹೇಗೋ ಅದೇ ರೀತಿ ಆಚಾರ್ಯ ಪಂಕ್ತಿಯಲ್ಲಿ ಮಣವಾಳ ಮಹಾಮುನಿಗಳೇ ಕಡೆಯವರು. ವೆಂಕಟೇಶ ಸುಪ್ರಭಾತವನ್ನು ಮಣವಾಳ ಮಹಾಮುನಿಗಳ ಶಿಷ್ಯರು ಪ್ರತಿವಾದಿ ಭಯಂಕರಂ ಅಣ್ಣನ್ ಅವರು ರಚಿಸಿದಂತೆ ಪ್ರತೀತಿ. ಇವರೇ ಯದುಗಿರೀಶ ಸುಪ್ರಭಾತದ ಕರ್ತೃವೆಂದೂ ಹಿರಿಯರು ಗುರುತಿಸುವರು.

ಆಳ್ವಾರುಗಳು ಹನ್ನೆರಡು ಮಂದಿ ಇದ್ದರೂ ಒಬ್ಬರಿಗಾದರೂ ಸುಪ್ರಭಾತಸ್ತೋತ್ರ ರಚಿಸಬೇಕೆಂಬ ಮನಸ್ಸು ಬಾರದಿರುವುದು ವಿಚಿತ್ರವಾದ ಸಂಗತಿಯೇ ಸರಿ. ಅದೇ ರೀತಿ ಆಚಾರ್ಯರ ಕಾಲ ಮುಗಿದರೂ ಕೂಡ ಓರ್ವ ಆಚಾರ್ಯರಿಗಾದರೂ ಸಂಸ್ಕೃತದಲ್ಲಾಗಲೀ ತಮಿಳಿನಲ್ಲಾಗಲೀ ಸುಪ್ರಭಾತ ಸ್ತೋತ್ರ ರಚಿಸುವ ಮನಸ್ಸು ಏಕಾಗಲಿಲ್ಲವೋ ತಿಳಿಯದ ಅಂಶ. ಅಲ್ಲಿನವರೆಗೂ ಸುಪ್ರಭಾತ ಸ್ತೋತ್ರದ ಅವಶ್ಯಕತೆಯೇ ಕಂಡು ಬರಲಿಲ್ಲವೇನೋ. ಆಂಡಾಳ್ ತಿರುಪ್ಪಾವೈನಲ್ಲಿ ಭಗವಂತನನ್ನು ಎಚ್ಚರಗೊಳಿಸುವ ವಸ್ತುವುಳ್ಳ ಒಂದೆರಡು ಪಾಶುರಗಳನ್ನು ರಚಿಸಿದರೂ ಕೂಡ ಅದು ಸುಪ್ರಭಾತಸ್ತೋತ್ರ ಎನಿಸಿಕೊಳ್ಳದೆ ಬೇರೆ ಪ್ರಬಂಧವೇ ಆಗಿಬಿಟ್ಟಿತು. ಇದರಿಂದ ಬೇರೆ ಇತರ ಆಳ್ವಾರ್‌ಗಳೂ ಸುಪ್ರಭಾತ ಸ್ತೋತ್ರ ರಚನೆಗೆ ಪ್ರಭಾವಿತರಾಗದೇ ಹೋದದ್ದೂ ಆಶ್ಚರ್ಯದ ಸಂಗತಿಯೇ ಸರಿ.

ದೇವರ ತಿರುವಾರಾಧನ ವಿಧಿಗಳಲ್ಲಿ ಸುಪ್ರಭಾತವೂ ಒಂದು ಅಂಗ. ತಿರುವಾರಾಧನ ಆರಂಭವಾಗುವ ಮುನ್ನ ದೇವರನ್ನು ಎಬ್ಬಿಸಲು, ಉಪಯೋಗಿಸುವ ಕ್ರಮವೇ ಸುಪ್ರಭಾತ. ಇದನ್ನು ಆಚರಿಸಲು ಶ್ಲೋಕದ ಅವಶ್ಯಕತೆ ಬೇಡವೇ. ಆಳ್ವಾರ್ ಕಾಲಕ್ಕೆ ಯಾರ ಸ್ತೋತ್ರಗಳು ಈ ವಿಧಿಗೆ ಬಳಸಲ್ಪಡುತ್ತಿದ್ದಿತು. ಆಚಾರ್ಯರ ಕಾಲಕ್ಕೆ ಯಾವ ಸ್ತೋತ್ರ ಬಳಸಲ್ಪಡುತ್ತಿದ್ದಿತು ಹಾಗಿದ್ದರೆ?

ಹಿಂದೆ ಪ್ರಾಯಶಃ ''ಕೌಸಲ್ಯಾ ಸುಪ್ರಜಾರಾಮ ಪೂರ್ವಾ ಸಂಧ್ಯಾ ಪ್ರವರ್ತತೇ। ಉತ್ತಿಷ್ಠ ನರಶಾರ್ದೂಲ ಕರ್ತವ್ಯಂ ದೈವಮಾಹ್ನಿಕಂ'' ಎಂಬ ವಾಲ್ಮೀಕಿ ರಾಮಾಯಣದ ಸುಪ್ರಭಾತದ ಸ್ತೋತ್ರ ಒಂದನ್ನು ಬಳಸುತ್ತಿದ್ದಿರ ಬೇಕೆಂದು ಅದು ವೆಂಕಟೇಶ ಸುಪ್ರಭಾತದ ಪ್ರಾರಂಭದಲ್ಲಿ ಅನುಸಂಧಾನಿಸಲ್ಪಡುವುದರಿಂದ ಊಹಿಸಲು ಸಾಧ್ಯವಾಗುತ್ತದೆ. ತದನಂತರ ಯಾರೋ ಪೂರ್ವಾಚಾರ್ಯರು ರಚಿಸಿದ ''ಉತ್ತಿಷ್ಠೋತ್ತಿಷ್ಠ ಗೋವಿಂದ, ಉತ್ತಿಷ್ಠ ಗರುಡಧ್ವಜ, ಉತ್ತಿಷ್ಠ ನರಶಾರ್ದೂಲ, ತ್ರೈಲೋಕ್ಯಂ ಮಂಗಳಂ ಕುರು'' - ಎಂಬ ಮತ್ತೊಂದು ಸ್ತೋತ್ರ ಸೇರ್ಪಡೆ ಗೊಂಡಿರಬೇಕೆಂದು ಸ್ಪಷ್ಟವಾಗುತ್ತದೆ.

ಅಂತೂ ತಿರುಪತಿಯಲ್ಲಿ ವೆಂಕಟೇಶ ಸುಪ್ರಭಾತ ಈಗ ಅನುಸಂಧಾನಿಸಲ್ಪಡುತ್ತಿದೆ. ಶ್ರೀರಂಗದಲ್ಲಿ ''ತಿರುಪ್ಪಳ್ಳಿಯೆಳುಚ್ಚಿ'' ಅನುಸಂಧಾನವಾಗುತ್ತಿದೆ ಎಂದು ಕೇಳಿದ್ದೇನೆ. ಆಚಾರ್ಯ ರಾಮಾನುಜರು ತಿರುವಾರಾಧನ ಕ್ರಮವನ್ನು ಮೊದಲಿಗೆ ರೂಪಿಸಿ ನಿತ್ಯಗ್ರಂಥವೆಂಬ ಗ್ರಂಥ ರಚಿಸಿದರು. ಮುಂದೆ ಮಣವಾಳ ಮಾಮುನಿಗಳೂ ತಿರುವಾರಾಧನ ಕ್ರಮವೆಂಬ ಕೃತಿ ರಚನೆ ಮಾಡಿ ದೇವರ ಪೂಜಾವಿಧಾನ ಇಂತಿರಬೇಕೆಂದು ಸ್ಪಷ್ಟಪಡಿಸಿಕೊಟ್ಟರು.

ಈಗ ಪ್ರತಿ ದಿನವೂ ಶ್ರೀವೈಷ್ಣವರು ಅನುಸಂಧಾನ ಮಾಡುವ ನಿತ್ಯಾನುಸಂಧಾನ ಪ್ರಬಂಧಗಳಲ್ಲಿ ತಿರುಪ್ಪಳಿಯೆಳುಚ್ಚಿ ಕೂಡ ಸೇರಿಸಲ್ಪಟ್ಟಿರುವ ಪ್ರಬಂಧವಾಗಿದೆ.

ಆದರೂ ತೊಂಡರಡಿಪ್ಪೊಡಿ ಆಳ್ವಾರ್ ಅವರಿಗಾದರೂ ತಮಿಳು ಭಾಷೆಯಲ್ಲಿ ಒಂದು ಸುಪ್ರಭಾತ ಪ್ರಬಂಧವನ್ನು ರಚಿಸುವ ಮನಸ್ಸು ಹೇಗೆ ಮೂಡಿ ಬಂದಿತು ಎಂಬುದನ್ನು ಪರಿಶೀಲಿಸಿದಾಗ ತಿಳಿದುಬರುವ ಅಂಶ ಇಂತಿದೆ.

ತೊಂಡರಡಿಪ್ಪೊಡಿ ಆಳ್ವಾರ್ ಅವರ ಕಾಲ ಕ್ರಿ.ಶ. 9 ನೇ ಶತಮಾನದ ಆದಿ ಆಗಿದ್ದಿರಬೇಕು. ಇದೇ ಸಮಯಕ್ಕೋ ಇಲ್ಲ ಸ್ವಲ್ಪ ಮುಂಚಿತವಾಗಿಯೋ ನಾಯನಮಾರ್‌ಗಳಲ್ಲಿ ಓರ್ವರು ಸಮಯಾಚಾರ್ಯರೆಂದು ಪ್ರಸಿದ್ಧರಾದ ಮಾಣಿಕ್ಯವಾಚಕರ್ ಎಂಬ ಮಹಾನುಭಾವರು ಈಶ್ವರನ ಮೇಲೆ ತಿರುಪ್ಪಳ್ಳಿಯೆಳುಚ್ಚಿ ಎಂಬ ತಮಿಳು ಪ್ರಬಂಧವನ್ನು ರಚಿಸಿರುವರೆಂದು ತಿಳಿದುಬರುತ್ತವೆ. ಇವರ ಕಾಲವನ್ನು ನಿರ್ದಿಷ್ಟವಾಗಿ ಯಾರೂ ಹೇಳುವುದಿಲ್ಲ. ತಮಿಳು ಸಾಹಿತ್ಯಲಾಕ್ಷಣಿಕರು ಇನ್ನೂ ನಾಲ್ಕನೇ ಶತಮಾನದಿಂದ ಹತ್ತರವರೆಗೂ ಎಳೆದಾಡುತ್ತಿರುವರು (T.M.P. ಮಹಾದೇವನ್ ಅವರ Ten saints of south India) ಆದ್ದರಿಂದ ತೊಂಡರಡಿಪ್ಪೊಡಿ ಆಳ್ವಾರ್ ಅವರ ತಿರುಪ್ಪಳ್ಳಿಯೆಳುಚ್ಚಿ ಪ್ರಬಂಧ ರಚನೆಗೆ ಸ್ಫೂರ್ತಿಯನ್ನು ಮಾಣಿಕ್ಯ ವಾಚಕರ ಪ್ರಬಂಧ ನೀಡಿರಬಹುದಾದ ಸಾಧ್ಯತೆ ಇದೆ. ಈ ಸುಪ್ರಭಾತರಚನೆ ಕೂಡ ತೊಂಡರಡಿಪ್ಪೊಡಿ ಆಳ್ವಾರ್ ಅವರ ಕಾಲಕ್ಕೆ ಸಮೀಪದ್ದಾಗಿಬೇಕು. ಏಕೆಂದರೆ ಇದರ ರಚನೆ ಇನ್ನೂ ಹಿಂದೆಯೇ ನಡೆದಿದ್ದಾದರೆ ಬೇರೆ ಆಳ್ವಾರುಗಳಿಗೆ ಸುಪ್ರಭಾತ ಪ್ರಬಂಧ ರಚನೆಗೆ ಪ್ರೇರೇಪಣೆ ನೀಡುತ್ತಿತ್ತೇನೋ. ಹಾಗೇನೂ ನಡೆದಿಲ್ಲದಿರುವುದರಿಂದ ಈ ರೀತಿ ಊಹೆ ಮಾಡಬಹುದೆಂದು ನನ್ನ ಅನಿಸಿಕೆ.

ಮಾಣಿಕ್ಯ ವಾಚಕರ ಮತ್ತು ತೊಂಡರಡಿಪ್ಪೊಡಿ ಆಳ್ವಾರ್‌ಗಳ ಶಿವ ಮತ್ತು ವಿಷ್ಣುಪರವಾದ ಸುಪ್ರಭಾತಗಳ ಹೆಸರುಗಳು ಒಂದೇ - ತಿರುಪ್ಪಳ್ಳಿಯೆಳುಚ್ಚಿ. ಎರಡರಲ್ಲಿನ ಪಾಶುರಗಳ ಸಂಖ್ಯೆ ಕೂಡ ಕ್ರಮವಾಗಿ ಹತ್ತೆ ಹತ್ತು. ಪಳ್ಳಿಯೆಳುಚ್ಚಿ ಎಂದರೆ ಶಯ್ಯೆ ಅಥವಾ ಹಾಸಿಗೆಯಿಂದ ಮೇಲೆಬ್ಬಿಸುವುದು ಎಂದು ಅರ್ಥ. ತಿರುಪ್ರತ್ಯಯ - ಶ್ರೇಷ್ಠ ಎಂದು ಅರ್ಥ - ಸಾಮಾನ್ಯವಾಗಿ ದಿವ್ಯ ಪ್ರಬಂಧ, ಕ್ಷೇತ್ರ, ದೇವರುಗಳ ಹೆಸರುಗಳ ಮುಂದೆ ಸೇರಿಸುವ ರೂಢಿ ಬೆಳೆದು ಬಂದಿದೆ. ಮಾಣಿಕ್ಯ ವಾಚಕರು ತಿರುಪ್ಪೆರುಂತುರೈ ಎಂಬ ಶೈವದಿವ್ಯಕ್ಷೇತ್ರದ ಅಧಿದೈವದ ಮೇಲೆ ತಮ್ಮ ಪ್ರಬಂಧ ರಚಿಸಿದ್ದರೆ ತೊಂಡರಡಿಪ್ಪೊಡಿ ಆಳ್ವಾರ್ ಶ್ರೀವೈಷ್ಣವ ಸಂಪ್ರದಾಯದ ಉಗಮಸ್ಥಾನ, ಕೇಂದ್ರ ಬಿಂದು ಎನಿಸಿದ ಶ್ರೀರಂಗಕ್ಷೇತ್ರದ ಅಧಿದೈವ ಶ್ರೀರಂಗನಾಥನ ಮೇಲೆ ಸುಪ್ರಭಾತ ಪ್ರಬಂಧ ರಚಿಸಿದ್ದಾರೆ. ಮಾಣಿಕ್ಯ ವಾಚಕರು ತಮ್ಮ ಪ್ರಬಂಧದಲ್ಲಿ ತಮ್ಮ ಅಂಕಿತವಾವುದನ್ನೂ ಸೇರಿಸಿಲ್ಲ. ಆದರೆ ತೊಂಡರಡಿಪ್ಪೊಡಿ ಆಳ್ವಾರ್ ತಿರುಪ್ಪಳ್ಳಿಯೆಳುಚ್ಚಿಯ ಕಡೆಯ ಪಾಶುರದಲ್ಲಿ ತಮ್ಮ ಹೆಸರನ್ನು ಸೇರಿಸಿಕೊಂಡಿದ್ದಾರೆ.

ಮಾಣಿಕ್ಯವಾಚಕರ ತಿರುಪ್ಪಳ್ಳಿಯೆಳುಚ್ಚಿಯಲ್ಲಿ ಭಕ್ತಿಮತ್ತು ಅಧ್ಯಾತ್ಮ ವಿವರಣೆಗೆ ಹೆಚ್ಚು ಪ್ರಾಧಾನ್ಯ ಇದೆ. ಪ್ರಭಾತವರ್ಣನೆಗೆ ಅಷ್ಟಾಗಿ ಪ್ರಧಾನ್ಯ ಕಂಡುಬರುವುದಿಲ್ಲ. ಮೊದಲಿನ ನಾಲ್ಕು ಪಾಶುರಗಳಲ್ಲಿ ಪ್ರಾತಃಕಾಲದ ಪ್ರಕೃತಿ ವ್ಯಾಪಾರದ ನವುರಾದ ವಿವರಣೆ, ಭಗವಂತನ ದರ್ಶನಕ್ಕೆ ಕಾದಿರುವ ಭಕ್ತವೃಂದದ ಸಂಭ್ರಮಾದಿಗಳು, ಚಿತ್ರಿತವಾಗಿವೆ. ಮಿಕ್ಕ ಆರು ಪಾಶುರಗಳಲ್ಲಿ ಅಧ್ಯಾತ್ಮ ತತ್ವಗಳೇ ತುಂಬಿಕೊಂಡಿವೆ. ಕೇವಲ ಪಾಶುರಗಳ ಕಡೆಯಲ್ಲಿ ಬರುವ 'ಪ್ಪಳ್ಳಿಯೆಳುಂದರುಳಾಯೆ' ಪದದಿಂದ ಸುಪ್ರಭಾತಸ್ತೋತ್ರ ಎನ್ನಬೇಕಾಗುತ್ತಿದೆ. ಆದರೆ ತೊಂಡರಡಿಪ್ಪೊಡಿ ಆಳ್ವಾರ್ ಅವರ ಕೃತಿಯಲ್ಲಿ ಪ್ರಾತಃಕಾಲದ ಪ್ರಕೃತಿ ವರ್ಣನೆ ಸಾಂದ್ರವಾಗಿದ್ದು ದೇವನನ್ನು ದರ್ಶಿಸಲು ಕಾದಿರುವ ದೇವಗಣ, ಋಷಿಗಣ, ಭಕ್ತಗಣ, ಗಾಯಕವರ್ಗ, ಮಂಗಳದ್ರವ್ಯವನ್ನು ತಂದಿರುವವರ ನೂಕುನುಗ್ಗುಲು, ಸಂಭ್ರಮ, ದೇವತೆಗಳ ವಾಹನಾದಿಗಳ ವಿವರ, ಸೈನ್ಯ, ಮಂದಮಾರುತನ ನಲಿಪೊಲವು, ಪಕ್ಷಿಗಳ ಕಲಕೂಜನ, ತರತರದ ಹೂಗಳ ಅರಳುವಿಕೆ, ಕಾದಿರುವವರ ಕಾತುರ ಮನೋಭಾವ - ಎಲ್ಲವೂ ಎಲ್ಲಾ ಹತ್ತು ಪಾಶುರಗಳಲ್ಲೂ ಹದವಾಗಿ ಸೇರಿಕೊಂಡು ಪ್ರಬಂಧವನ್ನು ಕಾವ್ಯಮಯ, ಗಾನಮಯ, ಭಕ್ತಿಮಯವನ್ನಾಗಿ ಮಾಡಿದೆ. ಮಾಣಿಕ್ಯ ವಾಚಕರದು ಮೊದಲ ಕೃತಿ ಆದ್ದರಿಂದ ವರ್ಣನೆಗಳು ಸಾಂದ್ರವಾಗಿ ಮೂಡಿ ಬಂದಿಲ್ಲದಿರಬಹುದೆಂದು ಊಹಿಸಲು ಸಾಧ್ಯವಾಗುತ್ತದೆ. ಇದರಿಂದ ಆ ಕೃತಿಯನ್ನು ಕಿರಿದಾಗಿ ಭಾವಿಸಬಾರದು. ''ಗಗನಂ ಗಗನಾಕಾರಂ, ಸಾಗರಂ ಸಾಗರೋಪಮಃ'' ಎನ್ನುವಂತೆ ಅವುಗಳಿಗೆ ಅವು ಹೆಚ್ಚು. ಇವುಗಳಿಗೆ ಇವು ಹೆಚ್ಚು. ಎರಡೂ ದೈವಗಳನ್ನು ಕುರಿತ ಕೃತಿಗಳು ಒಂದರ ಜೊತೆ ಮತ್ತೊಂದನ್ನು ಒರೆಹಚ್ಚಿನೋಡುವುದು ಅಪಚಾರವೆಸಗಿದಂತೆ.

ಎರಡನ್ನೂ ಅಧ್ಯಯನಮಾಡಿ ಅರ್ಥವನ್ನು ಅರಿತುಕೊಂಡು ಇಬ್ಬರ ಕಾವ್ಯಮಾರ್ಗವನ್ನೂ ಮೆಚ್ಚಿಕೊಳ್ಳುವುದು ಜಾಣು ಎಂದು ಭಾವಿಸಿ ಆ ಎರಡು ತಿರುಪ್ಪಳ್ಳಿಯೆಳುಚ್ಚಿಗಳ ಭಾವಾರ್ಥಗಳನ್ನು ಈ ಕೆಳಗೆ ಸಂಗ್ರಹವಾಗಿ ನೀಡಲು ಪ್ರಯತ್ನಿಸಲಾಗಿದೆ.

**ಮಾಣಿಕ್ಯವಾಚಕರ ತಿರುಪ್ಪಳ್ಳಿಯೆಳುಚ್ಚಿ :**

ನನ್ನ ಬಾಳಿಗೆ ಕಾರಣನಾದ ದೈವವೇ! ನಿನಗೆ ಜಯವಾಗಲಿ. ಬೆಳಗಾಯಿತು. ಪುಷ್ಪ ಸದೃಶವಾದ ನಿನ್ನ ಪಾದಗಳನ್ನು ಪೂಜಿಸುವೆವು. ನಿನ್ನಮುಖದಲ್ಲಿ ಮುಗುಳ್ನಗೆಯನ್ನು ಕಾಣಬೇಕು. ನಿನ್ನ ಪಾದಗಳಿಗೆ ನಮಿಸುವೆ. ತಾವರೆ ಪುಷ್ಪಗಳಿಂದ ಆವೃತವಾದ ತಿರುಪ್ಪೆರುಂತುರೈನ ಈಶ್ವರಾ! ನಂದಿಧ್ವಜನೇ! ನಮ್ಮನ್ನು ಭಕ್ತರನ್ನಾಗಿ ಕೊಂಡಿರುವ ಪರಮನೆ! ಏಳು, ಅನುಗ್ರಹಿಸು.



ನೀಡೆನಗೆ ಮತಿಯನ್ನು ನಿದ್ದೆಯಿಂದೇಳಲಿಕೆ.

ಅರುಣನು ಇಂದ್ರದಿಕ್ಕಿನಲ್ಲಿ ಕಾಣುತ್ತಿದ್ದಾನೆ. ಕತ್ತಲೆ ಸರಿಯಿತು. ಬೆಳಗಾಯಿತು. ನಿನ್ನ ಮಲರ್ ಸದೃಶವಾದ ಮುಖದಲ್ಲಿ ಕರುಣೆ ಎಂಬ ಸೂರ್ಯನು ಕಂಗೊಳಿಸಿದನು. ನಿನ್ನ ಕಣ್ಣುಗಳೆಂಬ ಹೂಗಳು ಅರಳಲು ನಮ್ಮ ಕಣ್ಣುಗಳೆಂಬ ದುಂಬಿಗಳು ಅದರಿಂದ ಒಸರುವ ಮಧುವನ್ನು ಪಾನಮಾಡಲು ಝೇಂಕಾರ ಮಾಡುತ್ತಿವೆ. ತಿರುಪ್ಪೆರುಂತುರೈಯಲ್ಲಿ ಕೋಯಿಲ್ ಕೊಂಡವನೇ ! ಶಿವಪೆರುಮಾನೆ! ಕೃಪೆಯನ್ನೂ ಪ್ರೀತಿಯನ್ನೂ ತೋರುವ ಆನಂದಮಲೆಯೆ! ಅಲೆಗಡಲೆ, ಶಯನದಿಂದೆದ್ದು ಅನುಗ್ರಹಿಸು!

ಕೋಗಿಲೆಗಳು, ಕೋಳಿಗಳು, ಕುರುಕು ಪಕ್ಷಿಗಳು ಧ್ವನಿಗೈಯುತ್ತಿವೆ. ಶಂಖ ನಾದವು ಕೇಳುತ್ತಿದೆ. ತಾರೆಗಳು ಮುಂತಾದುವು ಮುಳುಗಿ ಸೂರ್ಯಕಾಂತಿ ತುಂಬಿತು. ಮಹಾದೇವನೆ! ನಿನ್ನ ಪಾದಗಳನ್ನು ಅನುಗ್ರಹಿಸು. ಎಲ್ಲರಿಂದಲೂ ನಿನ್ನನ್ನು ಅರಿತುಕೊಳ್ಳಲು ಅಸಾಧ್ಯ ನೆನಿಸಿದವನೆ! ಆದರೆ ನಮಗೆ ಬೇಕಾದ ತಿರುಪ್ಪೆರುಂತುರೈ ಅಧಿದೈವವೇ, ಮೇಲೆದ್ದು ಅನುಗ್ರಹಮಾಡು.

ನಿನ್ನ ಸನ್ನಿಧಿಯಲ್ಲಿ ಒಂದುಕಡೆ ವೀಣೆವಾದನ ನಡೆಸುತ್ತಿದ್ದಾರೆ. ಒಂದು ಪಕ್ಕ ಯಾಳಿಯಿಂದ ಸುಸ್ವರ ಹೊರಡಿಸುತ್ತಿದ್ದಾರೆ. ಒಂದು ಕಡೆ ಸ್ತೋತ್ರ, ವೇದಾದಿಗಳು ಕೇಳುತ್ತಿವೆ. ಮತ್ತೊಂದು ಪಾರ್ಶ್ವದಲ್ಲಿ ಪುಷ್ಪಮಾಲೆಗಳನ್ನು ನಿನಗರ್ಪಿಸಲು ಕಾಯುತ್ತಿದ್ದಾರೆ. ಅದೋ ಆಕಡೆ ನಿನಗೆ ನಮಿಸಲು ಕಾಯುತ್ತ ಕಣ್ಣಿಂದ ಆನಂದ ಭಾಷ್ಪಗಳನ್ನು ಸುರಿಸುತ್ತ ಪರವಶತೆಯಿಂದ ತಲೆಮೇಲೆ ಕೈಯೆತ್ತಿ ನಮಿಸುತ್ತ ಕಾಯುತ್ತಿರುವ ಭಕ್ತರು ತುಂಬಿದ್ದಾರೆ. ತಿರುಪ್ಪೆರುಂತುರೈನ ಈಶ್ವರಾ! ದೈವವೇ! ನನ್ನನ್ನು ಆನತ ಜನರೊಡನೆ ಸೇರಿಸಿಕೊಂಡು ಅನುಗ್ರಹಿಸು - ಏಳು.

ಪಂಚಭೂತಗಳಲ್ಲೂ ನೀನು ಬೆಳಗುವೆ. ನಮ್ಮ ಅರಿವಿಗೆ ನಿಲುಕದವನೆ; ನಿನಗೊಂದು ರೂಪ ಉಂಟೆ. ನಿನಗೆ ಹುಟ್ಟು ಸಾವುಗಳೆಂಬುದು ಇಲ್ಲ ಎಂದು ಜ್ಞಾನಿಗಳು ವರ್ಣಿಸುತ್ತಾರೆ. ಮಾತ್ರವಲ್ಲ ನಿನ್ನನ್ನು ಕಂಡವರಿಲ್ಲ, ಕೇಳಿಯೂ ತಿಳಿದವರಿಲ್ಲ. ದರ್ಶನವಿತ್ತು ನಮ್ಮ ಅಪರಾಧಗಳನ್ನು ನೀಗಿ ಅನುಗ್ರಹಿಸುವವನೇ - ಏಳು.

ಪಾರ್ವತಿಯ ಪ್ರಿಯನೆ! ತಪವನ್ನೆಸಗಿ ನಿನ್ನ ಕರುಣೆಯನ್ನು ಹೊಂದಿರುವ ಭಕ್ತರು ಭವಪಾಶ, ಕರ್ಮಗಳನ್ನು ದೂರಮಾಡಿಕೊಂಡು ಕಾಡಿಗೆ ಯಿಟ್ಟ ಕಣ್ಣುಳ್ಳ ಕಾಮಿನೀ ಜನರಂತೆ ನಿನ್ನಲ್ಲಿ ನಾಯಿಕಾಭಾವವನ್ನುಹೊಂದಿ ನಮಿಸುತ್ತಿದ್ದಾರೆ. ತಾವರೆಕೊಳಗಳಿಂದ ಕಳಕಳಿಸುವ ತಿರುಪ್ಪೆರುಂತುರೈನ ಅಧಿದೈವವೇ, ನಮ್ಮ ಜನ್ಮ ವೆಂಬ ವ್ಯಾಧಿಗಳನ್ನು ನೀಗಿಸಿ ಅನುಗ್ರಹಿಸು, ಮೇಲೇಳು.

ಪರಂಪೊರುಳ್ ಎನಿಸಿರುವ ನೀನು ಹಣ್ಣಿನ ಸಿಹಿಯನ್ನು ಹೊಂದಿರುವೆಯಾ? ಅಮೃತವನ್ನು ಹೋಲುವೆಯಾ? "ಅದನ್ನು ಅರಿಯಲು ಸಾಧ್ಯವೆ ಅಥವಾ ಅಸಾಧ್ಯವೇ?" ಎಂಬ ವಿಚಾರವನ್ನು ದೇವಾದಿದೇವತೆಗಳೂ ಅರಿತಿರಲಾರರು. ಇದೇ ಅವನ ರೂಪ, ಆಕೃತಿ, ಇವನೇ ಅವನು ಎಂದು ನಾವುಗಳು ತಿಳಿದುಕೊಳ್ಳಲು ಎಂತಹ ಮಾರ್ಗವಿದೆಯೆಂದು ತಿಳಿಯಲಪೇಕ್ಷಿಸುತ್ತೇವೆ. ದಯವಿಟ್ಟು ಉತ್ತರಿಸು. ಜೇನು ಒಸರುವ ಹೂಗಳಿಂದ ತುಂಬಿರುವ ಉದ್ಯಾನದ ಉತ್ತರಕೋಶ ಮಂಗೈ ಕ್ಷೇತ್ರದ ಅಧಿದೈವವೇ! ಶಿವನೆ! ಹಾಸಿಗೆಯಿಂದ ಎದ್ದು ಅನುಗ್ರಹ ಮಾಡು.

ಈ ಬ್ರಹ್ಮಾಂಡಕ್ಕೆ ಆದಿ ಮಧ್ಯ ಅಂತ್ಯ ಎನಿಸಿಕೊಂಡವನೆ! ಬ್ರಹ್ಮವಿಷ್ಣುರುದ್ರ ಮೂವರಿಗೂ ನಿನ್ನ ಅಸ್ತಿತ್ವ ಗೊತ್ತಿಲ್ಲ. ಹೀಗಿರುವಾಗ ಬೇರೆಯವರು ಹೇಗೆ ನಿನ್ನ ಮಹಿಮೆಯನ್ನು ಅರಿಯಬಲ್ಲರು. ಪಂಡ ನಲ್ಲೂರಿನಲ್ಲಿ ಪಾರ್ವತಿಯೊಡನೆ ನಮ್ಮನ್ನು ಅನುಗ್ರಹಿಸುತ್ತಿರುವ ಪರಶಿವನೆ; ತಿರುಪ್ಪೆರುಂ ತುರೈಯನ್ನು ದೇಗುಲವನ್ನಾಗಿ ಮಾಡಿಕೊಂಡಿರು ವವನು ನೀನು. ಅದರಲ್ಲಿ ಗುರುವಾಗಿ, ತಾಪಸಿಯ ವೇಷದಲ್ಲಿ ನಿಂತು ದರ್ಶನ ನೀಡುತ್ತಿರುವ ದೈವವೇ! ನಮ್ಮನ್ನು ಉದ್ಧರಿಸಿದ ಅಮೃತ ಸ್ವರೂಪಿಯೇ ಮೇಲಕ್ಕೆ ಏಳು.

ಆಕಾಶದ ದೇವಾದಿದೇವತೆಗಳಿಗೆ ಅಲಭ್ಯ ನೆನಿಸಿದ ಐಶ್ವರ್ಯವೆ! ಈ ಮೃಣ್ಮಯ ಜಗತ್ತಿನಲ್ಲಿ ನೆಲಸಿ ನಿನ್ನ ಊಳಿಗದವರಾದ ಮಾನವರನ್ನು ಬಾಳಿಸುತ್ತಿರುವೆ. ಎಲ್ಲ ವಿಚಿತ್ರವಲ್ಲವೆ. ತಿರುಪ್ಪೆರುಂತುರೈನಲ್ಲಿ ನಿನ್ನ ಭಕ್ತರಾದ ನಮ್ಮಗಳ ಕಣ್ಣುಗಳು ಕೋರೈಸುವಂತೆ ಕಾಣ್ಕೆಯನ್ನು ನೀಡುವ ಅಮೃತವೇ! ಭಕ್ತರ ಮನಸ್ಸಿನಲ್ಲಿ ನೆಲೆಸಿರುವವನೆ! ಪ್ರಪಂಚಕ್ಕೆ ಉಸಿರಾದವನೆ! ನಮ್ಮ ದೈವವೇ ಏಳು.

ತಿರುಪ್ಪೆರುಂತುರೈನ ದೈವವೇ! ಭೂಮಿಯಲ್ಲಿ ಜನ್ಮವೆತ್ತಿದ್ದು ಕಾಲವನ್ನು ವ್ಯರ್ಥವಾಗಿ ತಳ್ಳುತ್ತಿರುವೆವೆಂದೇ ನಮ್ಮ ತಿಳುವಳಿಕೆ. ಆದರೆ ಈ ಭೂಲೋಕವೇ ಶಿವನ ಅನುಗ್ರಹ ಪಡೆದ ಜೀವಿಗಳು ಉಜ್ಜೀವಿಸುತ್ತಿರುವ ಕರ್ಮಕ್ಷೇತ್ರ ಎಂದು ಲಕ್ಷ್ಮೀವಲ್ಲಭ, ಬ್ರಹ್ಮಾದಿಗಳು ಈ ಭೂಲೋಕದಲ್ಲಿ ಜನ್ಮವೆತ್ತಲು ಆಶೆಪಡುತ್ತಾರೆ. ಆದ್ದರಿಂದ ನಾವು ನಿಜಕ್ಕೂ ಭಾಗ್ಯಶಾಲಿಗಳು. ನಿಮ್ಮ ಕರುಣೆಯಿಂದ ಭೂಲೋಕಕ್ಕೆ ಬಂದಿರುವೆವಲ್ಲವೆ. ನಮ್ಮನ್ನು ಕೈಹಿಡಿದು ನಡೆಸಬಲ್ಲ ಕೃಪಾಳುವೆ, ಅಮೃತ ಸ್ವರೂಪಿಯೇ, ಹಾಸಿಗೆಯಿಂದ ಮೇಲೆದ್ದು ಅನುಗ್ರಹ ಮಾಡು.

**ತೊಂಡರಡಿಪ್ಪೊಡಿ ಆಳ್ವಾರ್ ತಿರುಪ್ಪಳ್ಳಿಯೆಳುಚ್ಚಿ :**

ಮಾಣಿಕ್ಯವಾಚಕರ ಅತ್ಯಧಿಕ ಭಕ್ತಿ ಈ ಪಾಶುರಗಳಲ್ಲಿ ವ್ಯಕ್ತವಾಗುತ್ತದೆ. ಇದು ಪ್ರಾಬೋಧಕೀ ಗೀತೆ ಎನ್ನುವುದಕ್ಕಿಂತ ಭಕ್ತಿಮಯವಾದ ಕಾವ್ಯ ಎಂದು ನಾವು ಕರೆಯಬಹುದು. ಇನ್ನು ನಾವು ತೊಂಡರಡಿಪ್ಪೊಡಿ ಆಳ್ವಾರ್ ಅವರ ತಿರುಪ್ಪಳ್ಳಿಯೆಳುಚ್ಚಿಯಲ್ಲಿನ ಕಾವ್ಯ ಭಕ್ತಿರಸಧಾರೆಗಳ ಸಮ್ಮಿಶ್ರಣವನ್ನು ಸವಿಯೋಣ.

ಸೂರ್ಯನು ಪೂರ್ವದಿಕ್ಕಿನ ಉದಯಾದ್ರಿಯ ಶಿಖರವನ್ನು ಸೇರಿದ್ದಾನೆ. ಗಾಢವಾಗಿದ್ದ ಕತ್ತಲೆ ಕರಗಿತು. ಉದಯವಾಗುತ್ತಿದೆ. ಮನೋಹರ ವಾಗಿ ಪುಷ್ಪಗಳು ವಿಕಸಿಸುತ್ತಿವೆ. ಅವುಗಳಿಂದ ಮಧು ಒಸರುತ್ತಿದೆ. ದೇವತೆಗಳೂ, ರಾಜರೂ ತಮ್ಮ ತಮ್ಮ ಆನೆಗಳ ಜೊತೆಗೂಡಿ ನಿಂತಿದ್ದಾರೆ. ಭೇರಿಗಳ ಉದ್ಘೋಷ ಸಮುದ್ರದ ಅಲೆಗಳ ಶಬ್ದದಂತೆ ಕೇಳಿ ಬರುತ್ತಿದೆ. ಶ್ರೀರಂಗದ ಸ್ವಾಮಿಯೇ, ಶಯನದಿಂದೆದ್ದು ಕಟಾಕ್ಷಿಸು.

ಸಮೃದ್ಧವಾಗಿ ಬೆಳೆದ ಮೊಲ್ಲೆ ಹೂವಿನ ಪರಿಮಳವನ್ನು ಹೊತ್ತು ಪೂರ್ವದಿಕ್ಕಿನ ಮಂದಮಾರುತ ಆಹ್ಲಾದಕರವಾಗಿ ಬೀಸಿ ಬರುತ್ತಿದೆ. ತಾವರೆಯ ಹೂ ಹಾಸಿನಲ್ಲಿ ನಿದ್ರಿಸಿದ ಹಂಸಹಂಸೆಯರು ರಾತ್ರಿಯ ಇಬ್ಬನಿಯಿಂದ ನೆನೆದ ರೆಕ್ಕೆಗಳನ್ನು ಒದರಿಕೊಂಡು ಎದ್ದುವು. ಮೊಸಳೆಯ ಬಾಯ ವಿಷಮಯ

ಹಲ್ಲುಗಳಿಂದ ಕಚ್ಚಲ್ಪಟ್ಟ ಗಜೇಂದ್ರನ ಅಳಲನ್ನು ತ್ವರೆಯಿಂದ, ಆಪ್ತತೆಯಿಂದ ನಿವಾರಿಸಿದ ಶ್ರೀ ರಂಗನಾಥ. ಹಾಸಿಗೆಯಿಂದ ಎದ್ದು ಅನುಗ್ರಹ ಮಾಡು.

ಎಲ್ಲ ದಿಕ್ಕುಗಳಿಗೂ ಸೂರ್ಯಕಾಂತಿ ಪಸರಿಸಿತು. ಶೀತಲವಾದ ಚಂದ್ರನು ನಕ್ಷತ್ರಗಳ ಕಾಂತಿ ಮಂದವಾಗಲು ತಾನೂ ಕ್ಷೀಣಿಸಿದನು. ನಿಬಿಡವಾದ ಕತ್ತಲು ಚದುರಿತು. ಅಡಿಕೆ ಮರದ ಹೊಂಬಾಳೆಗಳ ಸುವಾಸನೆಯನ್ನು ಪ್ರಾತಃಕಾಲದ ಗಾಳಿ ಹೊತ್ತು ತರುತ್ತಿದೆ. ಉಜ್ವಲವಾದ ಚಕ್ರಾದಿ ಆಯುಧಗಳನ್ನು ಹಸ್ತದಲ್ಲಿ ಧರಿಸಿದ ಶ್ರೀರಂಗನಾಥ, ಶಯನದಿಂದ ಉತ್ಥಾನ ಹೊಂದಿ ರಕ್ಷಿಸು.

ಮೇಯಿಸುವ ಸಲುವಾಗಿ ಎಮ್ಮೆ, ಕರುಗಳ ಕಟ್ಟನ್ನು ಬಿಚ್ಚುತ್ತಿರುವ ಗೋಪಾಲಕರು ವೇಣುನಾದ ಮಾಡುತ್ತಿದ್ದಾರೆ. ವೃಷಭಗಳ ಕತ್ತಿನ ಗಂಟೆಗಳ ರವ ಎಲ್ಲೆಡೆಯೂ ತುಂಬಿದೆ. ದುಂಬಿಗಳು ಗದ್ದೆಗಳಲ್ಲಿನ ಹೂಗಳನ್ನು ಮುತ್ತುತ್ತಿವೆ. ಈಶ್ವರನೆ! ವಿಶ್ವಮಿತ್ರನ ಯಾಗವನ್ನು ನಿರ್ವಿಘ್ನವಾಗಿ ನೆರವೇರಿಸಿಕೊಟ್ಟು ಅವಭೃತ ಸ್ನಾನವು ಯಾವ ತೊಡರೂ ಇಲ್ಲದಂತೆ ಮಾಡಿಕೊಟ್ಟ ಧೀರೋದಾತ್ತ ಅಯೋಧ್ಯಾ ಪತಿಯೇ! ಶ್ರೀರಂಗನಾಥನೆ! ಮೇಲೆದ್ದು ಬಂದು ಅನುಗ್ರಹಿಸು.

ಉದ್ಯಾನದಲ್ಲಿ ಪಕ್ಷಿಗಳ ಇಂಚರ ತುಂಬಿದೆ. ರಾತ್ರಿ ಕಳೆದು ಹಗಲು ಬಂದು ಪೂರ್ವಸಾಗರದ ಘೋಷ ಸರ್ವತ್ರ ವ್ಯಾಪಿಸಿದೆ. ಭ್ರಮರಗಳು ಮಧುಪಾನದಿಂದ ಮತ್ತವಾಗಿ ಝೇಂಕರಿಸುತ್ತಿವೆ. ದೇವತೆಗಳು ವಿಧವಿಧವಾದ ಹೂಮಾಲೆಗಳನ್ನು ಕಟ್ಟಿ ತಂದು ನಿನಗರ್ಪಿಸಿ ನಮಸ್ಕರಿಸಲು ಕಾದುನಿಂತಿದ್ದಾರೆ. ಲಂಕೆಯರಸ ವಿಭೀಷಣನು ಭಕ್ತಿಯಿಂದ ಎಸಗುವ ಕೈಂಕರ್ಯವನ್ನು ಸ್ವೀಕರಿಸುವ ದಿವ್ಯವಾದ ಶ್ರೀರಂಗ ನಗರದ ಸ್ವಾಮಿಯೇ, ಹಾಸಿಗೆಯನ್ನು ಬಿಟ್ಟು ಎದ್ದು ಬಂದು ಕಟಾಕ್ಷಿಸು.

ದ್ವಾದಶಾದಿತ್ಯರು ರಥಗಳಲ್ಲಿ ಬಂದಿರುವರು. ಏಕಾದಶರುದ್ರರು ವೃಷಭಾದಿ ವಾಹನರಾಗಿ ಬಂದಿದ್ದಾರೆ. ಮಯೂರವಾಹನನಾಗಿ ಷಣ್ಮುಖನು ಬಂದಿದ್ದಾನೆ. ಮರುದ್ಗಣಗಳೂ ಅಷ್ಟ ವಸುಗಳೂ ತಮ್ಮ ತಮ್ಮ ಕುದುರೆ, ರಥಗಳೊಡನೆ ಬಂದು ಸಂದಣಿಸಿ ಗಾನವೆಸಗುತ್ತ ಕಾದಿದ್ದಾರೆ. ಸುಬ್ರಹ್ಮಣ್ಯನು ಸೇನಾಸಮೇತ ದರ್ಶನಕ್ಕಾಗಿ ಕಾದು ನಿಂತಿದ್ದಾನೆ. ಮೇರು ಸದೃಶವಾದ ನಿನ್ನ ದೇಗುಲದ ಮುಂದೆ ಈ ಜನ ಸಂದೋಹ ಪ್ರವಾಹದೋಪಾದಿ ರಂಜಿಸುತ್ತಿದೆ. ಎಲ್ಲರೂ ದರ್ಶನಾಕಾಂಕ್ಷಿಗಳಾಗಿ ನಿಂತಿರುವಾಗ ನೀನು ಶಯನವನ್ನು ಬಿಟ್ಟು ಬಂದು ಅನುಗ್ರಹ ಮಾಡು - ಶ್ರೀರಂಗನಾಥ.

ಆಕಾಶದಲ್ಲಿ ದೇವಗಣವೂ ಋಷಿಗಣವೂ ಕಿಕ್ಕಿರಿದು ನಿಂತಿವೆ. ಮರುದ್ಗಣಗಳೂ ಇಂದ್ರಾದಿಗಳೂ ತಮ್ಮ ತಮ್ಮ ವಾಹನಗಳೊಡನೆ ಬಂದಿದ್ದಾರೆ. ಐರಾವತವು ಇಂದ್ರನೊಡನೆ ಬಂದಿದೆ. ಯಕ್ಷ ಗಂಧರ್ವ ವಿದ್ಯಾಧರಾದಿಗಳು ನಿನ್ನ ದರ್ಶನಕ್ಕೆಂದು ಅಹಮಹಮಿಕೆಯಿಂದ ನೂಕಿನುಗ್ಗುತ್ತಿದ್ದಾರೆ. ನಿನ್ನ ದೇಗುಲದ ಮುಂದೆ ಜಾಗವೊಂದಿಷ್ಟು ಕಂಡುಬಾರದೆ ಎಲ್ಲೆಲ್ಲೂ ತುಂಬಲ್ಪಟ್ಟಿದೆ. ಭೂವ್ಯೋಮ ಎಲ್ಲೆಡೆಯೂ ಅವರುಗಳೇ, ಆದ್ದರಿಂದ ಶ್ರೀರಂಗನಾಥ ಶಯನದಿಂದ ಎದ್ದು ಎಲ್ಲರಿಗೂ ಕೃಪೆತೋರು.

ಪರಿಮಳಯುತವಾದ ಲೋಷ್ಠ ಲಾಮಂಚಾದಿಗಳನ್ನು ದೇವಲೋಕವಾಸಿಗಳು ಸಮರ್ಪಿಸಲು ತಂದಿದ್ದಾರೆ. ಶಂಖ, ಪದ್ಮ, ಕಪಿಲೆ, ಕನ್ನಡಿ, ಸ್ಫಟಿಕಮಯ ಪೂರ್ಣಕುಂಭಾದಿ ಮಂಗಳ ದ್ರವ್ಯಗಳನ್ನು ತುಂಬುರುನಾರಾದಾದಿಗಳನ್ನು ಮುಂದಿಟ್ಟುಕೊಂಡು ಬಂದ ಋಷಿಗಣ ತಂದು ಕಾದಿದೆ. ಸೂರ್ಯನು ಈಗಾಗಲೇ ಸಾಕಷ್ಟು ಮೇಲಕ್ಕೆ ಬಂದು ನಿಶೆಯ ನಾಮಾವಶೇಷ ಮಾಡಿದ್ದಾನೆ. ಶ್ರೀರಂಗನಾಥ; ಏಳುವ ಸಮಯವಾಯಿತು. ಶಯನವನ್ನು ಬಿಟ್ಟು ಎದ್ದು ಬಂದು ಅನುಗ್ರಹಿಸು.

ಮೃದುಮಧುರವಾದ ತಮಟೆ, ತಾಳ, ಮದ್ದಳೆ, ವೀಣೆ, ಯಾಳಿ, ಕೊಳಲು, ಭೇರಿ ಮುಂತಾದ ಗಾನವಾದ್ಯಗಳ ಇಂಚರ ದಿಕ್ಕುಗಳನ್ನೆಲ್ಲಾ ವ್ಯಾಪಿಸಿದೆ. ಕಿನ್ನರರು, ಗರುಡರು ರಾತ್ರಿಯೆಲ್ಲಾ ಸೊಗಸಾಗಿ ಗಾನ ಮಾಡಿದರು. ಮಹಾತಪಸ್ವಿಗಳೂ, ದೇವತೆಗಳೂ, ಚಾರಣರು, ಯಕ್ಷರು, ಸಿದ್ಧರು - ನಿನ್ನ ಪಾದಗಳನ್ನು ಸೇವಿಸಲು ಉತ್ಸುಕರಾಗಿ ನೆರೆದಿದ್ದಾರೆ. ಪ್ರಾತಃಕಾಲದ ವಾದ್ಯಗಳನ್ನು ಮೊಳಗಿಸಲು ಅಪ್ಪಣೆ ನೀಡು. ರಂಗನಾಥ, ಹಾಸಿಗೆಯಿಂದ ಮೇಲೆದ್ದು ಅನುಗ್ರಹ ಮಾಡು.

ಪರಿಮಳ ಭರಿತವಾದ ಕಮಲಪುಷ್ಪಗಳು ಅರಳಿದುವು. ಸೂರ್ಯನು ಮೇಲೆದ್ದು ಬಂದನು. ಉನ್ನತತನುಮಧ್ಯಮರಾದ ಸ್ತ್ರೀಯರು ನದಿಯಲ್ಲಿ ಮಿಂದು ಮಡಿಯಾಗಿ ಸೋರುಮುಡಿಯೊಡನೆ ನಿನ್ನ ದರ್ಶನವೆಸಗಲು ಕಾತುರರಾಗಿ ನಿಂತಿದ್ದಾರೆ. ಕಾವೇರಿಯ ತೋಳ್ಬಳಸಿನಲ್ಲಿ ಪವಡಿಸಿದ ಶ್ರೀರಂಗದ ಸ್ವಾಮಿಯೇ, ನಿನಗೆಂದೇ ರಚಿತವಾದ ತುಳಸೀ ಮಾಲೆಯನ್ನು ಇದೋ ನೀನು ಸ್ನೇಹಿತನಂತೆ ಅನುಗ್ರಹಿಸಿರುವ ಭಕ್ತಾಂಘ್ರಿರೇಣುವಾದ ನಾನು ಪರಮ ಭಕ್ತಿಯಿಂದ ತಂದಿದ್ದೇನೆ. ಸ್ವೀಕರಿಸಿ ಶೇಷ ಪರ್ಯಂಕದಿಂದೆದ್ದು ನಿನ್ನ ದರ್ಶನಕ್ಕೆಂದು ನೆರೆದಿರುವ ಎಲ್ಲರಿಗೂ ಕೃಪಾಕಟಾಕ್ಷ ನೀಡಿ ಅನುಗ್ರಹಿಸು.

- ಹೀಗೆ ತೊಂಡರಡಿಪ್ಪೊಡಿ ಆಳ್ವಾರ್ ಅವರ ತಿರುಪ್ಪಳ್ಳಿಯೆಳುಚ್ಚಿಯಲ್ಲಿ ಪ್ರತಿಪಾಶುರದಲ್ಲಿಯೂ ಪ್ರಭಾತದ ಅಂಶ ಅಂಗಗಳು ವಿವರಿತವಾಗಿವೆ. ಭಕ್ತಿ ಭಾವವೂ ಎಲ್ಲಾ ಪಾಶುರಗಳಲ್ಲೂ ಪ್ರದರ್ಶಿತಗೊಂಡಿದೆ. ಕಾವ್ಯ ಚಮತ್ಕಾರ, ವರ್ಣನಾವೈಖರಿ ಎಲ್ಲವೂ ಸೊಗಸಾಗಿ ಮೂಡಿ ಬಂದಿವೆ. ಪ್ರಾಸಾನುಪ್ರಾಸದಿಂದ ಪಾಶುರಗಳು ರಂಜಿಸುತ್ತವೆ. ಸರಾಗವಾಗಿ ಗಾಯನಮಾಡಲು ಶ್ರುತಿ ಲಯತಾಳ ಬದ್ಧವಾಗಿ ಸಾಹಿತ್ಯ ಹೆಣೆಯಲ್ಪಟ್ಟಿದೆ. ಭಕ್ತಭಾವುಕನಿಗೆ ಪರಮಾತ್ಮನಲ್ಲಿ ಮನಸ್ಸನ್ನು ಲೀನಗೊಳಿಸಲು ಮತ್ತೇನು ತಾನೆ ಅವಶ್ಯಕವೆನಿಸುತ್ತದೆ.

ಮಾಣಿಕ್ಯವಾಚಕರ ತಿರುಪ್ಪಳ್ಳಿಯೆಳುಚ್ಚಿಯ ವಸ್ತುವಿನ್ಯಾಸವನ್ನು ಆಧರಿಸಿ ತೊಂಡರಡಿಪ್ಪೊಡಿ ಆಳ್ವಾರ್ ತಮ್ಮ ತಿರುಪ್ಪಳ್ಳಿಯೆಳುಚ್ಚಿಯನ್ನು ರಚಿಸಿದರೂ ಇದೊಂದು ಪರಿಷ್ಕೃತ ರೂಪವನ್ನು ತಳೆದು ಸ್ವತಂತ್ರ ಕಾವ್ಯ ಎಂಬಂತೆಯೇ ಇಡೀ ನಾಲಾಯಿರ ದಿವ್ಯಪ್ರಬಂಧ ಸಾಹಿತ್ಯದ ಏಕೈಕ ಸುಪ್ರಭಾತ ಕೃತಿಯಾಗಿ, ಶ್ರೀವೈಷ್ಣವರ ಕಣ್ಣಾಗಿ, ಹೃದಯವಾಗಿ, ರಸಪ್ಲಾವಿತ ಸಾಹಿತ್ಯವಾಗಿ ಅಂದಿಗೂ ಇಂದಿಗೂ ಕಂಗೊಳಿಸುತ್ತಾ ಇದೆ ಎಂದು ಹೇಳ ಲಡ್ಡಿಯಿಲ್ಲ.

★★★★★

# ಭಗವಂತನ ರೂಪ-ಗುಣ ನಿರ್ಣಯ

**- ಕೆ. ಎಸ್. ಶ್ರೀವತ್ಸ**

ಪರಮಾತ್ಮನು ಮಾನವಾಕಾರವನ್ನು ಹೊಂದಿ, ಅವತಾರಿಯಾಗಿ ಬಂದು ಮಾನವರಂತೆಯೇ ಗುಣಚೇಷ್ಟೆಗಳನ್ನು ಅಭಿನಯ ಮಾಡಿ ತಾನು ಮಾನವನೇ ಎಂಬ ತನ್ಮಯ ಭಾವವನ್ನು ಪ್ರಕಟಿಸಿದನು. ಮಾನವ ಭಾವವನ್ನು ಪುಷ್ಟೀಕರಿಸುವ ಉದ್ದೇಶವೇನು? ಎಂಬುದನ್ನು ತಿಳಿಯಬೇಕು. ಇದಕ್ಕೊಂದು ಸಮಯ ಮತ್ತು ಸನ್ನಿವೇಶ ಅಗತ್ಯ. ರಾಮನವತರಿಸಿದ ಕಾಲದಲ್ಲಿ, ದುಷ್ಟರಾದ ರಾಕ್ಷಸರು ತಮ್ಮ ಬಲಗರ್ವದಲ್ಲೇ ಪೂರ್ಣ ನಂಬಿಕೆಯುಳ್ಳವರಾಗಿ ತಾವು ಯಾರಿಗೂ ಅಧೀನರಲ್ಲ, ತಮಗಿಂತ ಬೇರೊಂದು ಬಲವುಳ್ಳ ಸರ್ವಶ್ರೇಷ್ಠನಾದ ದೇವನಿಲ್ಲ. ಯಾರು ಬಲಿಷ್ಟರೋ ಅವರೇ ಸಾರ್ವಭೌಮರು, ದುರ್ಬಲರಿಗೆ ಎಂದಿಗೂ ತಲೆಬಾಗುವುದಿಲ್ಲ ಎಂಬ ಸ್ವಾತಂತ್ರ್ಯ ಭ್ರಮೆಯಿಂದ ಕೂಡಿದವರಾಗಿ, ಸ್ವೇಚ್ಛೆಯಾಗಿ ಯುಕ್ತಾಯುಕ್ತ ಪರಿಜ್ಞಾನವಿಲ್ಲದೆ, ಹಿಂಸೆ, ಕ್ರೌರ್ಯ, ಭಯವನ್ನುಂಟುಮಾಡಿ, ಧರ್ಮಾಧರ್ಮ ವಿವೇಕವಿಲ್ಲದೆ ಜನ ಸಾಮಾನ್ಯರನ್ನು, ಸತ್ಪುರುಷರನ್ನೂ ಹಿಂಸೆ, ಹಾನಿಗೆ ಒಳಪಡಿಸಿದರು. ಸದ್ಭಾವನೆಗಳನ್ನು ನಿಂದಿಸಿ, ಸದಾಚಾರಗಳನ್ನು ಆಚರಿಸದಂತೆ ಉಪದ್ರವಗಳನ್ನು ಮಾಡಿ ಪರದೇವತೆಗಳಲ್ಲಿ ನಿಂದೆ ಮತ್ತು ದ್ವೇಷವನ್ನು ತೋರುತ್ತಿದ್ದರು. ಬಲವನ್ನೇ ಉಪಾಸನೆ ಮಾಡುವ ವರ್ಗವು ಬೆಳೆದು, ವಿಶ್ವಮಾನ್ಯ ಗುಣಗಳಾದ ದಯೆ, ದಾನ, ಅನುಕಂಪ, ಸೌಹಾರ್ದ ಭಾವಗಳ ಸುಳಿವಿಲ್ಲದಂತೆ ಮಾಡಲು ಉದ್ಯುಕ್ತರಾದರು. ಈ ರೀತಿ ಲೋಕ ಕಂಟಕರಾಗಿದ್ದ ರಾಕ್ಷಸರನ್ನು ನಾಶಮಾಡಿ, ಧರ್ಮ ರಕ್ಷಣೆ, ಧರ್ಮ ಸಂದೇಶ ಆಚರಣೆಗಳನ್ನು, ಸಜ್ಜನರಿಗೆ ರಕ್ಷಣೆಯನ್ನು, ಸಮಾಜದ ಜನತೆಯಲ್ಲಿ ದಯಾ, ಕಾರುಣ್ಯ, ಸೌಶೀಲ್ಯ ಗುಣಗಳನ್ನು ವ್ಯಕ್ತ ಮಾಡಿ, ಅವರನ್ನು ದುಃಖಗಳಿಂದ ಪಾರು ಮಾಡಿ, ಶಾಂತಿ ಸುಖಗಳನ್ನು ಪಡೆದು ಅನಂತ ಆನಂದ ಭಾಗಿಗಳನ್ನಾಗಿ ಮಾಡಲು ವಿಶ್ವ ಸುಂದರನಾದ ಪರಮಾತ್ಮನು ಅವತರಿಸಿ, ತನ್ನ ದರ್ಶನಾನುಭವದ ಲಾಭವನ್ನು ಎಲ್ಲರಿಗೂ ನೀಡಿದನು.

ಭಗವಂತನು ಅವತಾರ ಮಾಡದೇ ಇದ್ದ ಕಾಲವಿತ್ತು. ಆಗಲೂ ಪರಮಾತ್ಮನು ಇದ್ದಾನೆ. ಅವನನ್ನು ತಿಳಿಯಲು ನಮಗೆ ಗೋಚರವಾಗುವ ರೂಪಗುಣಗಳು ಯಾವುವು? ಎಂಬ ಪ್ರಶ್ನೆಗೆ ವೇದೋಪನಿಷತ್ತುಗಳಲ್ಲಿಯೂ, ಅವನನ್ನು ಸಾಕ್ಷಾತ್ಕರಿಸಿಕೊಂಡ ಮಹನೀಯರಾದ ಋಷಿಗಳ ವಾಙ್ಮಯದಲ್ಲಿಯೂ ವಿವರಗಳನ್ನು ಕಾಣುತ್ತೇವೆ. ಅಚಿಂತ್ಯನೂ, ಅದ್ಭುತನೂ, ಅಗೋಚರನಾಗಿರುವವನ್ನು, ಯೋಗ, ಧ್ಯಾನ, ಸಮಾಧಿಗಳ ಪರಿಶ್ರಮದಿಂದ ಜಿತೇಂದ್ರಿಯರಾದ ಋಷಿಗಳು ಕಂಡು ಅನುಭವಿಸಿರುತ್ತಾರೆ. ಈ ರೂಪಗುಣ ಸೌಂದರ್ಯವು ಪರಮಾತ್ಮನಿಗೆ ಸಹಜವಾಗಿರುವ ಧನ. ಅವನು ಅವತಾರಿಯಾಗಿ ಬಂದಾಗಲೂ, ಬಾರದಿರುವಾಗಲೂ, ಈ ಗುಣಗಳು ಅವನನ್ನು ಎಡೆಬಿಡದೆ ಇದ್ದೇ ಇರುತ್ತದೆ. ಇದು ಅವನ ಸ್ವಭಾವವಾದ್ದರಿಂದ ಗುಣಗಳನ್ನು ಬೇರ್ಪಡಿಸಿ ಅವನನ್ನು ಅನುಭವಿಸಲಾಗದು. ಆಕಾರ ಭೇದದಿಂದ ಗುಣಭೇದವಾಗುವುದಿಲ್ಲ. ತತ್ವ ಚಿಂತಕರು ಪರಮಾತ್ಮನು ಅವತಾರಿಯಾಗಿ ಬಂದಾಗಲೂ ವಿಗ್ರಹ ರೂಪಿಯಾದ ಪರಮಾತ್ಮನಲ್ಲಿ ರೂಪಗುಣಗಳನ್ನು ಅನುಭವಿಸಿದ್ದಾರೆ.

ಆದ್ದರಿಂದ ಪರೋಕ್ಷದಲ್ಲಿ ಕಾಣಬಹುದಾದ ಪರವಸ್ತುವು ಪ್ರತ್ಯಕ್ಷವಾಗಿಯೇ ನೋಡಲು ಸಾಧ್ಯವಾದಾಗ, ಇದಕ್ಕಿಂತಲೂ ಉತ್ತಮವಾದ ಉಪಾಸನೆಯ ಅವಶ್ಯವಿಲ್ಲ. ಇದರಿಂದ ಅವತಾರದಲ್ಲಿ ಕಂಡ ರೂಪ, ಗುಣ, ಮಹಿಮಾತಿಶಯಗಳನ್ನು ಕಂಡು ನೆನೆದು ಪರವಶರಾಗುವುದು ಎಲ್ಲರಿಗೂ ಎಲ್ಲ ಕಾಲದಲ್ಲೂ ಸಾಧ್ಯವಾಗಿದೆ. ಋಷಿಗಳು ಧ್ಯಾನ ಸಮಾಧಿಗಳಲ್ಲಿ ಕಂಡ ಪರಮಾತ್ಮನ ದಿವ್ಯ ಮಂಗಳ ವಿಗ್ರಹವನ್ನೇ ಅವನು ಅವತಾರಿ ಆಗಿ ಬಂದಾಗಲೂ ಮತ್ತು ಅನಂತರವೂ ಅನುಭವಿಸಿ ಅವನ ದರ್ಶನ ರೂಪ ಗುಣಗಳ ವೈಭವವನ್ನು ಪ್ರಕಾಶಮಾಡುತ್ತಾರೆ.

ಪರಮಾತ್ಮನು ಸದಾ ದಿವ್ಯರೂಪಿಯಾಗಿದ್ದಾನೆ. ಎಲ್ಲರೂ ತನ್ನ ದರ್ಶನ ಲಾಭ ಪಡೆದು ಆನಂದಿಸಲಿ ಎಂಬ ಉದ್ದೇಶದಿಂದ ತನ್ನ ಅವ್ಯಕ್ತವಾದ ದಿವ್ಯರೂಪವನ್ನು ಅವತಾರ ರೂಪದಲ್ಲಿ ವ್ಯಕ್ತ ಮಾಡುತ್ತಾನೆ. ಅವನು ಅವತಾರಗಳನ್ನು ಮಾಡಿದರೇನೆ ಸರ್ವಾನುಭವ ಯೋಗ್ಯನಾಗಲು ಸಾಧ್ಯ. ಅವನು ಅವತಾರ ಮಾಡದೇ ಅವ್ಯಕ್ತನಾಗಿದ್ದರೆ, ಅವನು ಕೇವಲ ಸರ್ವಜ್ಞರ ಸ್ವತ್ತಾಗಿ, ಅವರಿಗೆ ಆಪ್ತ ಧನವಾಗಿ, ಸಾಮಾನ್ಯ ಜನರ (ಜ್ಞಾನಹೀನರ) ಪ್ರೀತಿಗೆ ಪಾತ್ರನಾಗದೇ, ಅವರ ಆನಂದಕ್ಕೆ ವಸ್ತುವಾಗದೆ ಅವರಿಂದ ಪರಿತ್ಯಕ್ತನಾಗಬೇಕಾದ ಸಂಭವವು ಏರ್ಪಡುತ್ತದೆ.

ವಿಷ್ಣುವಿನ ಅವತಾರಗಳಲ್ಲೆಲ್ಲಾ ರಾಮ ಕೃಷ್ಣಾದ್ಯವತಾರಗಳು ಪ್ರಸಿದ್ಧವಾದವು. ಶ್ರೀರಾಮಾವತಾರದಲ್ಲಿ ಭಗವಂತನ ರೂಪ, ಗುಣ, ಇತ್ಯಾದಿ ಭಾವಗಳನ್ನು ವಾಲ್ಮೀಕಿ ಮಹರ್ಷಿಯು ಹೇಗೆ ಚಿತ್ರಿಸಿದ್ದಾನೆ? ಈ ಚಿತ್ರವರ್ಣನೆಯಿಂದ ಉಪನಿಷತ್ತುಗಳಲ್ಲಿ ಪ್ರತಿಪಾದ್ಯವಾದ ಪರಬ್ರಹ್ಮ ಸ್ವರೂಪವನ್ನು ಆನಂದಿಸಲು ಸಾಧ್ಯವೇ ಎಂಬುದನ್ನು ಪರಿಶೀಲಿಸಬಹುದು. ದಿವ್ಯಾತ್ಮನಾದ ಶ್ರೀರಾಮನ ಸ್ವರೂಪ ಚಿತ್ರದ ಪೂರ್ಣಾನುಭವವನ್ನು ಸುಂದರಕಾಂಡದಲ್ಲಿ ಸೀತಾಂಜನೇಯರ ಸಂವಾದದಲ್ಲಿ ಕಾಣಬಹುದು. ರಾಮನ ಪೂರ್ಣಾನುಭವ ಮಾಡಿದವಳು ಸೀತೆ. ಹೇಳುವವನು ವೇದಪಾರಂಗತನೂ, ವಿರಕ್ತನೂ, ಶ್ರೀ ರಾಮನ ಪರಮಭಕ್ತನೂ ಆದ ಹನುಮಂತ. ಅವನು ಆಚಾರ್ಯಸ್ವರೂಪಿಯೂ ಹೌದು. ವಾಲ್ಮೀಕಿಯು ಇಲ್ಲಿ ರಾಮನ ಯಥಾರ್ಥ ಪೂರಿತವಾದ ರೂಪವನ್ನು ವರ್ಣಿಸಿದ್ದಾನೆ. ಸೀತೆಯನ್ನು ಅದುವರೆವಿಗೂ ಹನುಮಂತನು ಕಂಡವನಲ್ಲ. ಶ್ರೀರಾಮನನ್ನು ಸಂಧಿಸಿ, ಅವರ ರೂಪ ಸೌಂದರ್ಯವನ್ನು ಕಂಡು ಅನುಭವಿಸಿದವನು, ರಾಮನ ಉತ್ತಮಗುಣ ವಾತ್ಸಲ್ಯ, ದಯಾನುಕಂಪ, ಶೌರ್ಯ, ತೇಜಸ್ಸು-

ಇವುಗಳನ್ನು ಕಂಡವನು. ರಾಮನಿಂದ ಸೀತೆಯ ಗುಣರೂಪಗಳನ್ನು ಕೇಳಿ ತಿಳಿದಿದ್ದವನು. ಮೊದಲಿಗೆ ಸೀತೆಯು ಹನುಮಂತನನ್ನು ಕಂಡು ರಾವಣನೆಂದು ಸಂಶಯಪಟ್ಟಳು. ಆದರೆ ಭಗವಂತನಾದ ರಾಮನನ್ನು ಸಾಕ್ಷಾತ್ಕಾರ ಮಾಡಿದ ಇಬ್ಬರು ಶುದ್ಧಾತ್ಮರು, ಅವರವರ ಅನುಭವ ಪರೀಕ್ಷೆ ಮಾಡುವ ಸಂದರ್ಭದಲ್ಲಿ ಶ್ರೀರಾಮನ ಗುಣರೂಪಗಳನ್ನು ಬಹು ಚೆನ್ನಾಗಿ ನಮ್ಮ ಮುಂದೆ ಚಿತ್ರಿಸಿದ್ದಾರೆ.

ಸೀತೆಯು ಹನುಮಂತನನ್ನು ಈ ರೀತಿ ಪ್ರಶ್ನಿಸುತ್ತಾಳೆ - ನಿಮಗೂ ನರರಾದ ರಾಮ ಲಕ್ಷ್ಮಣರಿಗೂ ಹೇಗೆ ಸಮಾಗಮ ಆಯಿತು ? ನಿನ್ನಲ್ಲಿ ಸಂಪೂರ್ಣ ನಂಬಿಕೆ ಬರಬೇಕಾದಲ್ಲಿ ಶ್ರೀರಾಮನ ಅಂಗಾಂಗ ಚಿಹ್ನೆಗಳನ್ನು ತಿಳಿಸು. ಅವನ ಬಾಹುಗಳು, ತೊಡೆಗಳು ಹೇಗಿವೆ? ಅವನ ಗುಣಗಳೇನು? ಅವನ ಮಾತುಗಳು ಹೇಗೆ - ಇತ್ಯಾದಿ.

ಹನುಮಂತನು 'ತತೋ ರಾಮಂ ಯಥಾ ತತ್ವಂ ಆಖ್ಯಾತು ಮುಪಚಕ್ರಮೆ' ಎಂದು ಆರಂಭಿಸಿ ರಾಮನನ್ನು ಹೇಗೆ ಅವನು ನೋಡಿದ್ದನೋ ಅದೇ ರೀತಿ ವರ್ಣಿಸಲು ಆರಂಭಿಸುತ್ತಾನೆ.

ರಾಮ ಕಮಲ ಪತ್ರಾಕ್ಷಃ
ಸರ್ವ ಸತ್ವ ಮನೋಹರಃ
ರೂಪ ದಾಕ್ಷಿಣ್ಯ ಸಂಪನ್ನ
ತೇಜಸಾದಿತ್ಯಸಂಕಾಶಃ
ಕ್ಷಮಯಾ ಪೃಥಿವೀ ಸಮಃ
ರಕ್ಷಿತಾ ಜೀವ ಲೋಕಸ್ವ
ಸ್ವಜನಸ್ವ ಚ ರಕ್ಷಿತಾ
ರಕ್ಷಿತಾ ಸ್ವಸ್ಯ ವೃತ್ತಸ್ಯ
ಧರ್ಮಸ್ಯ ಚ ಪರಂತಪ
ಸಾಧೂನಾಂ ಉಪಕಾರಜ್ಞಃ
ಪ್ರಜಾರಾಜ್ಯಸ್ಯ ಸರ್ಮಣಂ
ರಾಜ ವಿದ್ಯಾ ವಿನೀತಸ್ಯ
ಬ್ರಾಹ್ಮಣಾನಾಂ ಉಪಾಸಿತಃ
ಶ್ರುತವಾನ್ ಶೀಲ ಸಂಪನ್ನಃ
ವಿನೀತಶ್ಚ ಪರಂತಪಃ
ವೇದವಿದ್ಭಿಃ ಸಂಪೂಜಿತ

- ಇತ್ಯಾದಿ.

ಕಮಲದಂತೆ ಕಣ್ಣುಳ್ಳವನು, ಎಲ್ಲರಿಗೂ ಮನೋಹರನಾಗಿರುವನು, ರೂಪ ದಾಕ್ಷಿಣ್ಯ ಗಳಿಂದ ಕೂಡಿದವನು, ತೇಜಸ್ಸಿನಲ್ಲಿ ಆದಿತ್ಯನಿಗೆ ಸಮಾನನು, ಸಾಧುಗಳಿಗೆ ಉಪಕಾರ ಮಾಡುವವನು, ರಾಜವಿದ್ಯಾ ಪಾರಂಗತನೂ, ಬ್ರಾಹ್ಮಣರಿಂದ ಉಪಾಸಿಸಲ್ಪಡುವವನು, ಬಹುಶ್ರುತನು, ಸುಶೀಲನು, ವೇದವಿತ್ತುಗಳಿಂದ ಪೂಜಿಸಲ್ಪಡುವವನು - ಇತ್ಯಾದಿ.

ಮೇಲ್ಕಂಡ ಗುಣಗಳು ರಾಮನದಲ್ಲಿ ಪ್ರತ್ಯಕ್ಷಗೋಚರವಾಗಿದ್ದವು. ಗುಣಗಳು ಬಹಿರಂಗವಾಗದ ಕಾಲದಲ್ಲಿ ದೇಹದಲ್ಲಿ ಅಂತರ್ಗತವಾಗಿದ್ದು, ಈ ಅಂತರ್ಗುಣಗಳು ಉಪಾಸನೆಗೆ ಪ್ರಧಾನವೆಂದು ವ್ಯಾಸ ಮಹರ್ಷಿಗಳು ''ಅಂತರ್ಗುಣಾತ್ ಭಜತೆ'' ಎಂಬ ಸೂತ್ರದಲ್ಲಿ ನಿಶ್ಚಯಿಸಿರುತ್ತಾರೆ. ಈ ಶ್ರುತವಾದ ಗುಣಗಳು ಮನಸ್ಸಿನಲ್ಲಿ ಪರಿಣಾಮ ಮಾಡಿ ಬಹುಕಾಲ ಚಿಂತಿಸುವುದರಿಂದ ಪ್ರತ್ಯಕ್ಷಾನುಭವ ಸಿದ್ಧವಾಗುತ್ತದೆ. ಭಗವಂತನ ಅನಂತಾನಂತ ಗುಣಗಳಲ್ಲಿ ಕೆಲವನ್ನು ಮಾತ್ರ ಅವತಾರಿಯಾಗಿದ್ದಾಗ ಅವನು ತೋರಿದ್ದಾನೆ. ಅವುಗಳನ್ನೇ ಹನುಮಂತನು ಸೀತೆಗೆ ಹೇಳಿದ್ದು. ಪ್ರಕೃತಿಬದ್ಧರಾಗಿರುವ ನಮಗೆ ಭಗವಂತನ ಪೂರ್ಣಗುಣಾನುಭವಗಳು ಶಕ್ಯವಿಲ್ಲ. ಆದ್ದರಿಂದಲೇ ಮುಖ್ಯವಾದ ಕೆಲವನ್ನು ಮಾತ್ರ ಅವತಾರ ಕಾಲದಲ್ಲಿ ಭಗವಂತನು ಪ್ರಕಟಪಡಿಸುತ್ತಾನೆ. ಹನುಮಂತನು ಶ್ರೀರಾಮನ ರೂಪ ವರ್ಣನೆಯನ್ನು ಮಾಡುತ್ತಾ ಶ್ರೀರಾಮನ ರೂಪವು ಸಾಮಾನ್ಯವಾಗಿ ಸುಂದರ ರಾಗಿರುವವರ ರೂಪಕ್ಕಿಂತಲೂ ಅತಿ ವಿಲಕ್ಷಣವಾದದು ಎಂದಿದ್ದಾನೆ. ಈ ಲಕ್ಷಣಗಳನ್ನು ನೋಡಿದವರು ಶ್ರೀರಾಮನು ಅತಿ ಮಾನುಷ ರೂಪಿಯಾದ ಮಹಾಪುರುಷನೆಂದು ನಿರ್ಣಯಿಸಿರುತ್ತಾರೆ. ಸುಮಾರು ಎಂಟು ಶ್ಲೋಕಗಳಲ್ಲಿ ರಾಮನ ರೂಪವನ್ನು ವಾಲ್ಮೀಕಿ ತಿಳಿಸಿದ್ದಾನೆ.

ವಿಪುಲಾಂಸೋ ಮಹಾಬಾಹುಃ
ಕಂಬುಗ್ರೀವಃ ಶುಭಾನನಃ
ಗೂಢಜತ್ರುಃ ಸುತಾಮ್ರಾಕ್ಷೋ
ರಾಮೋ ದೇವಿ ಜನ್ಯೆಃ ಶ್ರುತಃ
ದುಂದುಭಿಸ್ವನನಿರ್ಘೋಷಃ
ಸ್ನಿಗ್ಧವರ್ಣಃ ಪ್ರತಾಪವಾನ್
ರಾಮಸಮ ವಿಭಕ್ತಾಂಗೋ
ವರ್ಣಂ ಶ್ಯಾಮಂ ಸಮಾಶ್ರಿತಃ
ತ್ರಿಸ್ಥಿರಸ್ತ್ರಿಪ್ರಲಂಭಶ್ಚ
ತ್ರಿಸಮಸ್ತ್ರಿಷು ಚೋನ್ನತಃ
ತ್ರಿತಾಮ್ರಸ್ತ್ರಿಷು ಚ ಸ್ನಿಗ್ಧೋ
ಗಂಭೀರಸ್ತ್ರಿಷು ನಿತ್ಯತಃ

------ಇತ್ಯಾದಿ.

ದೇವಿ, ಶ್ರೀರಾಮನಿಗೆ ವಿಶಾಲವಾದ ಹೆಗಲು, ದೀರ್ಘವಾದ ಬಾಹು, ಶಂಖದಂತಹ ಕುತ್ತಿಗೆ, ಶುಭಲಕ್ಷಣಗಳಿರುವ ಮುಖ, ಮಾಂಸಪುಷ್ಟವಾದ್ದರಿಂದ ಕಾಣಿಸದಿರುವ ಭುಜದ ಕೀಲು, ಕೆಂಪಗಿರುವ ಕಡೆಗಣ್ಣು, ದುಂದುಭಿಯಂತೆ ಗಂಭೀರವಾದ ಧ್ವನಿ, ಹೊಳಪಾದ ಬಣ್ಣ, ಬಲಿಷ್ಠವಾದ ಸಮ ಪ್ರಮಾಣದ ದೇಹ, ಒಂದಕ್ಕೊಂದು ಅನುರೂಪವಾದ ಅವಯವ, ಮೈಬಣ್ಣ ಶ್ಯಾಮಲ, ಶ್ರೀರಾಮನ ಎದೆ, ಮಣಿಕಟ್ಟು, ಮುಷ್ಟಿ ಇವು ಮೂರು ಗಟ್ಟಿಯಾಗಿವೆ. ಹನುಮಂತನು ರಾಮನ ಅವಯವಗಳನ್ನೆಲ್ಲಾ ನೋಡಿದ್ದ ನೆಂದಾಗಲಿ, ಅವುಗಳನ್ನೆಲ್ಲಾ ಒಂದೊಂದಾಗಿ ವರ್ಣಿಸುತ್ತಾನೆ ಎಂದಾಗಲಿ ತಿಳಿಯಬಾರದು. ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿದ ಶುಭಲಕ್ಷಣಗಳು ರಾಮನಲ್ಲಿವೆಯೆಂದು ಅವನು ಹೇಳುತ್ತಿದ್ದಾನೆ.

ಶ್ರೀ ರಾಮಾನುಜರು ತಮ್ಮ ವೇದಾರ್ಥ ಸಂಗ್ರಹದಲ್ಲಿ ಹನುಮಂತನಿಂದ ವರ್ಣಿತವಾದ ಶ್ರೀರಾಮನ ರೂಪಗುಣಗಳೇ ಶ್ರುತಿ ವೇದ್ಯವೆಂದೂ, ಅದೇ ಪರಮಾತ್ಮನ ಯಥಾರ್ಥರೂಪವಾದ ತತ್ತ್ವದರ್ಶನವೆಂದು ಅಭಿಪ್ರಾಯಪಟ್ಟಿದ್ದಾರೆ. ರಾಮಾಯಣದಲ್ಲಿ ತಿಳಿಸಿರುವ ಭಗವದ್ವಿಗ್ರಹ ರೂಪವೇ ಪರಮಾತ್ಮನ ದಿವ್ಯ ಮಂಗಳ ರೂಪವೆಂಬುದು ಚೆನ್ನಾಗಿ ವ್ಯಕ್ತಪಡುತ್ತದೆ. ಈ ರೂಪ ಸೌಂದರ್ಯವನ್ನು ಅನೇಕ ಅರ್ಚಾ ಮೂರ್ತಿ ಗಳಲ್ಲಿ ಕಾಣಬಹುದು. ವಿಶೇಷವಾಗಿ ಶ್ರೀ ಶ್ರೀನಿವಾಸನ ಆಕರ್ಷಕವಾದ ದಿವ್ಯ ಮಂಗಳ ವಿಗ್ರಹದಲ್ಲಿ ರಾಮಾಯಣದಲ್ಲಿ ವರ್ಣಿತ ವಾಗಿರುವ ರೂಪ ಸೌಂದರ್ಯವನ್ನು ಕಾಣಬಹುದು.

★★★★★

# ನ್ಯೂನ - ಶಿಲ್ಪಕಲೆಯ ಅಸಾಧಾರಣ ತಾಣ

- ಆದ್ಯ ರಾಮಾಚಾರ್ಯ.

ಕನ್ನಡ ನಾಡಿನ ಚಾಲುಕ್ಯರ ಕಲಾ ಪ್ರತಿಭೆಯು ಕೇವಲ ದಕ್ಷಿಣದಲ್ಲಷ್ಟೇ ಸೀಮಿತವಾಗಿರದೆ ಪೂರ್ವ ಪಶ್ಚಿಮಗಳಲ್ಲಿಯೂ ಸಹ ಅದು ಸಾಕಷ್ಟು ಬೆಳೆದಿರುವುದು ಇತಿಹಾಸ ಪ್ರಸಿದ್ಧ ವಿಷಯ. ಖರಗೌನ - ಇದು ಮಧ್ಯಪ್ರದೇಶದ ಪಶ್ಚಿಮ ಭಾಗದಲ್ಲಿಯ ನಿಮಾಡ ಎಂಬ ಜಿಲ್ಲೆಯ ಮುಖ್ಯ ಸ್ಥಳ. ಈ ಖರಗೌನದಿಂದ ಕೇವಲ ಹತ್ತು ಕಿ.ಮೀ, ಅಂತರದಲ್ಲಿ ನ್ಯೂನ ಎಂಬ ಹೆಸರಿನ ಗ್ರಾಮ ಒಂದಿದೆ. ಇದು ಖಜುರಾಹೋದ ಮೂರ್ತಿ ಶಿಲ್ಪಕಲೆಗಳಿಗೆ ಪ್ರತಿಸ್ಪರ್ಧೆಯ ರೂಪದಲ್ಲಿ ಕಾಣುವಂಥ ಸ್ಥಳವೆನಿಸಿದೆ. ಭಾರತೀಯ ಪುರಾತತ್ವ ಸಂಶೋಧಕರು ಇಲ್ಲಿ ಕಾಣುವ ಶಿಲ್ಪಗಳೆಲ್ಲ ಖಜುರಾಹೋ ಸ್ಥಾಪತ್ಯದ ಕಾಲವನ್ನೇ ಹೋಲುತ್ತವೆ ಎಂದೆನ್ನುತ್ತಾರೆ.

ದಿ ಇಂದೂರ್ ಗೆಜೆಟಿಯರ್‌ದಲ್ಲಿ ಕೊಡಲ್ಪಟ್ಟ ದಾಖಲೆಯು ದಂತಕಥಾ ರೂಪದಲ್ಲಿದ್ದರೂ ಸಹ ಅದು ಕನ್ನಡನಾಡಿನ ಚಾಲುಕ್ಯಾಭಿಮಾನಿಗಳಿಗೆ ಅಭ್ಯಾಸಯೋಗ್ಯ ವಿಷಯವೆಂದೆನಿಸುತ್ತದೆ. ಮಾಳವಾ ರಾಜ್ಯದ ಹೊಯ್ಸಳ ವಂಶದ ಶಾಸಕನಾಗಿದ್ದ ದ್ವಿತೀಯ ಬಲ್ಲಾಳದೇವನಿಗೆ ಸರ್ಪಹುಣ್ಣಿನ ಬಾಧೆ ಬಹುವಾಗಿ ಕಾಡತೊಡಗಿತು. ಆ ನೋವನ್ನು ಸಹಿಸಲಾರದ ಆತನು ತನ್ನ ರಾಣಿಯರೊಂದಿಗೆ ಪ್ರವಾಸ ಹೊರಟಾಗ ಒಂದು ರಾತ್ರಿಯನ್ನು ಮಾರ್ಗ ಮಧ್ಯದಲ್ಲಿಯೇ ಕಳೆಯಬೇಕಾಯಿತು. ಅಂದು ಬಲ್ಲಾಳದೇವನ ಸ್ವಪ್ನದಲ್ಲಿ ಒಂದು ದೇವತೆಯ ದರ್ಶನವಾಗಿ ''ನೀರಿನಲ್ಲಿ ಅದ್ದಿದ ಅಥವಾ ತೋಯಿಸಿದ ಸುಣ್ಣವನ್ನು ನೀನು ಸೇವಿಸಿದಲ್ಲಿ ನಿನ್ನನ್ನು ಬಾಧಿಸುತ್ತಿರುವ ಈ ಸರ್ಪಹುಣ್ಣಿನ ನೋವಿನ ಬಾಧೆಯು ಕಡಿಮೆಯಾಗುವುದಲ್ಲದೆ, ನೀನು ಬಿಡಾರ ಮಾಡಿದ ಸ್ಥಳದ ಸಮೀಪದಲ್ಲಿ ವಿಶಾಲವಾಗಿ ಬೆಳೆದ ಹುತ್ತವನ್ನು ಪೂಜಿಸಿ ಅದನ್ನು ಅಗೆಸಿ ತೆಗೆದಲ್ಲಿ ಆ ಸ್ಥಳದಲ್ಲಿಯೇ ನಿನಗೆ ಅಪರಿಮಿತ ಸಂಪತ್ತು ಲಭಿಸುತ್ತದೆ. ನೀನು ಈಗ ಅನುಭವಿಸುತ್ತಿರುವ ಕಷ್ಟ ನಷ್ಟಗಳೆಲ್ಲ ದೂರಾಗುತ್ತವೆ'' ಎಂದು ಸೂಚನೆಯಾಯಿತಂತೆ. ಎಚ್ಚರಗೊಂಡಾಗ ಆತನ ಮೈಮನಗಳು ಪುಲಕಿತಗೊಂಡವು.

ತನ್ನ ಸಂಗಡ ಕರೆದುಕೊಂಡು ಬಂದ ಪಂಡಿತರನ್ನು ಕರೆಸಿ ತಾನು ಅನುಭವಿಸಿದ ಸ್ವಪ್ನ ವೃತ್ತಾಂತವನ್ನೆಲ್ಲ ಸಾದ್ಯಂತವಾಗಿ ತಿಳಿಸಿದಾಗ ಆಗ ಆ ಪಂಡಿತರೆಲ್ಲ ಒಕ್ಕೂಡಿಕೊಂಡು ಶಾಸ್ತ್ರ ವಿಧಿ ನಿಯಮಾನುಸಾರವಾಗಿ ಆ ಹುತ್ತವನ್ನು ಪೂಜೆ ಮಾಡಿ ಅದನ್ನು ಸಂಪೂರ್ಣ ಅಗೆದು ತೆಗೆದಾಗ ಧನಕನಕಾದಿಗಳಿಂದ ತುಂಬಿದ ಅನೇಕ ಹಂಡೆಗಳು ಲಭ್ಯವಾದವಂತೆ. ಸಂತೋಷ ಚಿತ್ತನಾದ ಬಲ್ಲಾಳದೇವನು ಅದೇ ಸ್ಥಳದಲ್ಲಿ ನೂರು ದೇವಾಲಯಗಳನ್ನು ಕಟ್ಟಿಸುವುದಾಗಿ ಸಂಕಲ್ಪ ಮಾಡಿದನಂತೆ. ಆದರೆ ಆತನ ಜೀವಿತಾವಧಿಯಲ್ಲಿ ನೂರಕ್ಕೆ ಒಂದು ದೇವಾಲಯವನ್ನು ಮಾತ್ರ ನಿರ್ಮಿಸಲಾಗದೆ ಕೇವಲ ತೊಂಬತ್ತೊಂಬತ್ತು ದೇವಮಂದಿರಗಳು ನಿರ್ಮಾಣಗೊಂಡ ಕಾರಣ ಮುಂಚೆ ಆ ಸ್ಥಳವನ್ನು ನೂರಕ್ಕೊಂದು ಕೊರತೆ ಎಂಬ ಹೆಸರಿನರ್ಥ ಬರುವಂತೆ ನ್ಯೂನ ಎಂದೇ ಆ ಸ್ಥಳವು ಪ್ರಸಿದ್ಧಿಗೆ





ಬರುವಂತಾಯಿತೆಂದು ಗ್ವಾಲಿಯರ್ ಗೆಜೆಟಿಯರ್‌ನಲ್ಲಿ ಈ ಮಾತನ್ನು ಉದ್ಧರಿಸಲಾಗಿದೆ.

ಅಂದು ನಿರ್ಮಾಣಗೊಂಡ ನ್ಯೂನ ಗ್ರಾಮದಲ್ಲಿಯ ದೇವಾಲಯಗಳೆಲ್ಲ ಅಧಿಕಾಂಶದಲ್ಲಿ ಇಂದು ಸಂಪೂರ್ಣ ಶಿಥಿಲಗೊಂಡಿವೆ. ಅಂದಿನ ತೊಂಬತ್ತೊಂಬತ್ತು ದೇವಮಂದಿರಗಳಲ್ಲಿ ಇಂದು ಕೇವಲ ಹನ್ನೆರಡು ದೇವಾಲಯಗಳು ಮಾತ್ರ ಗತಕಾಲದ ಇತಿಹಾಸಕ್ಕೆ ಸಾಕ್ಷಿಯಾಗಿ ಉಳಿದುಕೊಂಡು ನಿಂತಿವೆ. ಈ ಹನ್ನೆರಡು ದೇವಾಲಯಗಳೂ ಪೂರ್ವಾಭಿಮುಖವಾಗಿಯೇ ಇವೆ. ಅವುಗಳಲ್ಲಿರುವ ವಿಶಾಲವಾದ ಮಂಟಪಗಳು, ಅಲ್ಲಿ ಬಿಡಿಸಲಾದ ಕೆತ್ತನೆಯ ಕಂಬಗಳು, ಭುವನೇಶ್ವರಿಗಳು, ಕಲಾಪ್ರೇಮಿಗಳನ್ನು ಆಶ್ಚರ್ಯಚಕಿತರನ್ನಾಗಿ ಮಾಡುತ್ತವೆ. ಈ ಮಂದಿರಗಳೆಲ್ಲ ಹನ್ನೆರಡನೇ ಶತಮಾನದಲ್ಲಿ ವೈತಾಳಿ ಬಂದವುಗಳು. ಪ್ರತಿಯೊಂದು ದೇವಾಲಯದ ಕಂಬಗಳು ಬಹು ಕಲಾತ್ಮಕವಾಗಿವೆ. ಸಭಾ ಮಂಟಪದಲ್ಲಿ ಬಿಡಿಸಲಾದ ಕೆತ್ತನೆಯ ಕೆಲಸವಂತೂ ಮನಕ್ಕೆ ಆಹ್ಲಾದವನ್ನುಂಟು ಮಾಡುತ್ತದೆ. ಗರ್ಭಗೃಹಗಳಲ್ಲಿ ಅನೇಕ ದೇವದೇವಿಯರ ವಿಗ್ರಹಗಳೊಂದಿಗೆ ರಸಿಕರ ಮನವನ್ನು ಮುದಗೊಳಿಸುವಂಥ ಅಪ್ಸರ ಸ್ತ್ರೀಯರ ವಿಗ್ರಹಗಳನ್ನು ಬಿಡಿಸಲಾಗಿದೆ. ನಾಟ್ಯದ ಭಾವಭಂಗಿಗಳನ್ನು ವೀಕ್ಷಿಸುವುದೇ ನೇತ್ರಾನಂದವೆನಿಸುತ್ತದೆ. ಅಲ್ಲಲ್ಲಿ ನಟರಾಜನ ಸುಂದರ ವಿಗ್ರಹಗಳನ್ನು ಬಿಡಿಸಲಾಗಿದೆ. ಇದೆಲ್ಲ ಒಳಭಾಗದ ವಿಷಯವಾದರೆ ಅದೇ ದೇವಾಲಯಗಳ ಹೊರಭಾಗದಲ್ಲಿ ನಾನಾ ಭಂಗಿಯಲ್ಲಿರುವ ಮಿಥುನೀ ಭಾವದ ವಿಗ್ರಹಗಳನ್ನು ಖಜುರಾಹೋದಲ್ಲಿರುವಂತೆ ಇಲ್ಲಿಯೂ ಕಾಣಬಹುದು. ಹೊರಭಾಗದ ಕೆಲವು ವಿಗ್ರಹಗಳು ಅಲ್ಲಲ್ಲಿ ಕೆಲವು ಭಗ್ನಗೊಂಡಿವೆ.

ಇಲ್ಲಿ ಅಳಿದುಳಿದಿರುವ ಮಂದಿರಗಳಲ್ಲಿ ಮಹಾಕಾಲೇಶ್ವರನಾಥನ ಮಂದಿರವು ಚೆನ್ನಾಗಿದೆ. ಈ ಮಂದಿರದ ಎಡಬಲಗಳಲ್ಲಿಯೂ ಎರಡು ಭಗ್ನಾವಸ್ಥೆಯಲ್ಲಿರುವ ದೇವ ಮಂದಿರಗಳಿವೆ. ಸರಗೌನ ಹಾಗೂ ಜುಲಪಾನಿಯಾಗಳ ಮುಖ್ಯ ಮಾರ್ಗದ ಒಂದು ಭಾಗದಲ್ಲಿ ಚಾಲುಕ್ಯ ಶೈಲಿಯ ಚತುಷ್ಕೋನಾಕೃತಿಯ ಭವ್ಯವಾದ (ಬಾದಾಮಿ, ಐಹೊಳೆಯಲ್ಲಿರುವಂಥಹ) ಮಂದಿರವಿದ್ದು, ಈ ಮಂದಿರದಲ್ಲಿಯೂ ಸಹ ಅನೇಕ ಶೃಂಗಾರ ವಿಲಾಸ ಶೈಲಿಯಿಂದ ಕೂಡಿದ ಅಪ್ಸರ ಸ್ತ್ರೀಯರ ವಿಗ್ರಹಗಳನ್ನು ಬಿಡಿಸಲಾಗಿದೆ.

ನ್ಯೂನ ಗ್ರಾಮದ ಮಧ್ಯಭಾಗದಲ್ಲಿ ನೀಲಕಂಠೇಶ್ವರ ಮಹಾದೇವನ ಮಂದಿರವಿದೆ. ದೇವಾಲಯದ ಗೋಪುರವು ಕಾಲನ ಪ್ರಭಾವಕ್ಕೆ ಬಲಿಯಾಗಿ ಕಳಚಿ ಹೋಗಿದೆ. ದೇವಮಂದಿರದ ಗರ್ಭಗುಡಿಯಲ್ಲಿರುವ ಶಿವಲಿಂಗವು ಮಾತ್ರ ಬಹು ಮೋಹಕವಾಗಿದ್ದು ಸುರಕ್ಷಿತವಾಗಿದೆ. ಈ ಮಂದಿರದಲ್ಲಿಯೂ ಸಹ ಅನೇಕ ಸುಂದರವಾದ ಶಿಲಾಬಾಲಿಕೆಯರನ್ನು ಕೆತ್ತಲಾಗಿದ್ದು ಪ್ರವಾಸಿಗರ ಮನವನ್ನಾಕರ್ಷಿಸುತ್ತದೆ.

ನ್ಯೂನ ಗ್ರಾಮದ ದಕ್ಷಿಣ ದಿಕ್ಕಿನಲ್ಲಿ ಒಂದು ಕಿ.ಮೀ. ಅಂತರದಲ್ಲಿ ಬಹು ವಿಶಾಲವಾದ ಜೈನ ಮಂದಿರವಿದೆ. ಒಂದು ಕಾಲದಲ್ಲಿ ಇದನ್ನು ಗ್ವಾಲೇಶ್ವರ ಮಂದಿರವೆಂದೆನ್ನುತ್ತಿದ್ದರು. ಈಗ ಇದು ಶಾಂತಿನಾಥ ದೇವಮಂದಿರವಾಗಿದೆ. ಜೈನ ಧರ್ಮೀಯರ ಹದಿನಾರನೇ ತೀರ್ಥಂಕರ ಶ್ರೀ ಮೂರ್ತಿಯನ್ನು ಇಲ್ಲಿ ಇಡಲಾಗಿದೆ. ಹೀಗಾಗಿ ಈ ಸ್ಥಳವು ಜೈನ ಧರ್ಮಿಯರಿಗೆಲ್ಲ ಪವಿತ್ರ ಯಾತ್ರಾಸ್ಥಳವೆನಿಸಿದೆ. ಇದನ್ನು ಅವರು ಸಿದ್ಧಕ್ಷೇತ್ರವೆಂದು ಭಾವಿಸುತ್ತಾರೆ. ದೂರ ದೂರದಿಂದ ಬರುವ ಯಾತ್ರಿಕರಿಗಾಗಿ ವಿಶಾಲವಾದ ಧರ್ಮಛತ್ರವನ್ನು ಕಟ್ಟಿಸಿದ್ದಾರೆ. ಜೈನಧರ್ಮ ಸಂಶೋಧಕರಿಗೆ ಅನುಕೂಲವಾಗುವಂತಹ ಗ್ರಂಥ ಭಂಡಾರವಿದೆ. ಶ್ಯಾಮ ವರ್ಣದ ಮಹಾವೀರ ವಿಗ್ರಹವೂ ಇಲ್ಲಿದೆ. ಇದನ್ನು ಸಂವತ್ಸರ 1252 ರಲ್ಲಿ ಆಚಾರ್ಯ ಪ್ರಭಾಚಂದರರಿಂದ ಪ್ರತಿಷ್ಠಾಪಿಸಲಾಯಿತಂತೆ. ಪೌಷ್ಯ ಮಾಸ ಹುಣ್ಣಿಮೆಯ ದಿನ ಇಲ್ಲಿ ಹದಿನೈದು ದಿನಗಳ ಕಾಲ ಜಾತ್ರೆಯೂ ಕೂಡುತ್ತದೆ. ಇಲ್ಲಿರುವ ನಾರಾಯಣ ಕುಂಡವೆಂಬ ತೀರ್ಥದಲ್ಲಿ ಸ್ನಾನ ಮಾಡಿ ದೇವ ದರ್ಶನ ಪಡೆಯುವ ಸಂಪ್ರದಾಯವಿದೆ.

ನ್ಯೂನ ಗ್ರಾಮದಿಂದ ಎಪ್ಪತ್ತೈದು ಕಿ.ಮೀ. ದೂರದಲ್ಲಿ ಪಶ್ಚಿಮ ಭಾಗದಲ್ಲಿ ಬಡವಾನಿ ಎಂಬ ನವನಿರ್ಮಿತ ಜಿಲ್ಲಾ ಕೇಂದ್ರವಿದೆ. ಇಲ್ಲಿಂದ ಎಂಟು ಕಿ.ಮೀ. ಅಂತರದಲ್ಲಿ ಜೈನರ ಪವಿತ್ರ ಕ್ಷೇತ್ರವಾದ ಚೂಲಗಿರಿ ಎಂಬ ಪರ್ವತವಿದೆ. ಆ ಪರ್ವತದ ತುದಿ ಅಂಚಿನಲ್ಲಿ ವಿಶಾಲವಾದ ಋಷಭದೇವನ ವಿಗ್ರಹವನ್ನು ನಿರ್ಮಿಸಲಾಗಿದೆ. ಅದೇ ರೀತಿ 52 ಅಡಿ ಎತ್ತರದ ಭಗವಾನ್ ಬುದ್ಧದೇವನ ವಿಗ್ರಹವನ್ನು ನಿರ್ಮಿಸಿದ್ದಾರೆ. ವಿಶ್ವದಲ್ಲಿಯೇ ಇಷ್ಟೊಂದು ಎತ್ತರದ ಮೂರ್ತಿ ಬೇರೊಂದಿಲ್ಲವೆಂದು ಹೇಳುತ್ತಾರೆ. ಆದುದರಿಂದ ಸ್ಥಳೀಯ ಭಾವುಕರು ಈ ವಿಗ್ರಹವನ್ನು ಬಾವನ್ನಗಜಾ ವಿಗ್ರಹವೆಂದು ಕರೆಯುವುದುಂಟು. ಬಲ್ಲಾಳದೇವನಿಂದ ನಿರ್ಮಿತವಾದ ನ್ಯೂನ ಸ್ಥಳಕ್ಕೆ ಹೋಗಬೇಕಾದಲ್ಲಿ ಆಗ್ರಾ ಮುಂಬಯಿ ರಾಷ್ಟ್ರೀಯ ಮಾರ್ಗ ಮಧ್ಯದಲ್ಲಿ ಜುಲಬನಿಯಾ ಎಂಬ ಗ್ರಾಮವಿದೆ. ಅಲ್ಲಿಂದ ಇಪ್ಪತ್ತೆಂಟು ಕಿ.ಮೀ.ನಲ್ಲಿ ನ್ಯೂನ ಗ್ರಾಮವು ದೊರೆಯುತ್ತದೆ. ಇದರಂತೆ ಮುಂಬಯಿ ಇಟಾರ್ಸಿ ಮಾರ್ಗವಾಗಿಯೂ ಹೋಗಿ ಬರಬಹುದಾಗಿದೆ. ಚಾಲುಕ್ಯ ಶಿಲ್ಪಕಲಾಭ್ಯಾಸಿಗಳಿಗೆ ಈ ಸ್ಥಳವು ಬಹು ಮಹತ್ವದ ತಾಣವೆನಿಸುತ್ತದೆ.

★★★★★



# ಕನಕದಾಸರ ಮೋಹನ ತರಂಗಿಣಿ



- ಕಂದಾಡೈ ಕೇಶವನ್.

## ಜೀವನ

ದಾಸ ಶ್ರೇಷ್ಠರಾದ ಕನಕದಾಸರು ಕ್ರಿ.ಶ. 1509 ರಲ್ಲಿ ಧಾರವಾಡ ಜಿಲ್ಲೆಯ ಬಾಡದ ಹಳ್ಳಿಯಲ್ಲಿ ಬೀರಪ್ಪ ಮತ್ತು ಬಚ್ಚಮ್ಮ ಎಂಬುವ ದಂಪತಿಗಳಿಗೆ ಜನಿಸಿದವರು. ಬಾಡವು ಆಗಿನ ಕಾಲದಲ್ಲಿ ವಿಜಯನಗರದ ಸಾಮ್ರಾಜ್ಯಕ್ಕೆ ಸೇರಿತ್ತು. ಬಾಡದ ದಣ್ಣಾಯಕನಾದ ಬೀರಪ್ಪ ಕುರುಬರ ಜನಾಂಗಕ್ಕೆ ಸೇರಿದ್ದು ಶ್ರೀ ರಾಮಾನುಜಾಚಾರ್ಯರ ಪಂಥಕ್ಕೆ ಸೇರಿ ತಿರುಪತಿಯ ವೆಂಕಟೇಶ್ವರನ ಭಕ್ತನಾಗಿದ್ದನು. ಅದಕ್ಕಾಗಿಯೇ ಜನಿಸಿದ ತಮ್ಮ ಮಗುವಿಗೆ ಬೀರಪ್ಪನು ''ತಿಮ್ಮ'' ಎಂದು ನಾಮಕರಣ ಮಾಡಿದನು. ತಿಮ್ಮಪ್ಪನಿಗೆ ಚಿಕ್ಕಂದಿನಲ್ಲಿ ವಿಜಯ ನಗರದ ಸಾಮ್ರಾಜ್ಯದಲ್ಲಿ ಉತ್ತಮ ವಿದ್ಯಾಭ್ಯಾಸವು ಒದಗಿತು. ಆದರೆ ಚಿಕ್ಕಂದಿನಲ್ಲೇ ತಂದೆ ತೀರಿ ಹೋಗಿದ್ದರಿಂದ, ತಂದೆಯ ಮಾಂಡಲೀಕದ ಜವಾಬ್ದಾರಿ ಈತನ ಹೆಗಲಿಗೆ ಬಂತು. ತನ್ನ ಕಾರ್ಯದಕ್ಷತೆಯಿಂದ ವಿಜಯನಗರದ ರಾಜರ ಮೆಚ್ಚುಗೆಯನ್ನು ಗಳಿಸಿದನು. ಈತನ ಕಾಲದಲ್ಲಿ ರಾಜ್ಯದ ಬೊಕ್ಕಸಕ್ಕೆ ಅಪಾರ ಹಣ ಹರಿದುಬಂತು. ಅಂತೆಯೇ ಕನಕನಾಯಕನಾದನು. ತಿಮ್ಮಪ್ಪನು ಅನೇಕ ಯುದ್ಧಗಳಲ್ಲಿ ಗೆದ್ದು ಅಪಾರ ಹಣ ಸಂಪಾದಿಸಿ ಕೀರ್ತಿ ಮನ್ನಣೆಗಳನ್ನು ಹೊಂದಿದರೂ ಆತನ ಮನಸ್ಸು ಆಧ್ಯಾತ್ಮ ಜೀವನದ ಕಡೆ ಹರಿಯುತ್ತಲೇ ಇತ್ತು ಕಾರಣ ಈತನು ತಿರುಪತಿ ತಿಮ್ಮಪ್ಪನ ವರ ಪ್ರಸಾದದಿಂದ ಹುಟ್ಟಿದವನು. ಲೌಕಿಕ ಸಂಪತ್ತಿಗಿಂತ ಆಧ್ಯಾತ್ಮ ಸಂಪತ್ತೇ ಶ್ರೇಯಸ್ಕರವೆಂದು ರಾಮಾನುಜ ಸಿದ್ಧಾಂತದ ಆಗಿನ ತಾತಾಚಾರ್ಯರಿಂದ ಉಪದೇಶವನ್ನು ಪಡೆಯುತ್ತಿದ್ದ ತಿಮ್ಮಪ್ಪನಿಗೆ (ಕನಕನಿಗೆ) ಸಂಸಾರದಲ್ಲಿ ವೈರಾಗ್ಯ ಹುಟ್ಟಿತು. ರಾಜಗುರು ವ್ಯಾಸರಾಯರ ಹಾಗೂ ವಾದಿ ರಾಜರ ಆಶೀರ್ವಾದದಿಂದ ಕನಕದಾಸರು ಸರ್ವ ಸಂಗ ಪರಿತ್ಯಾಗಮಾಡಿ ವಿರಕ್ತರಾಗಿ ಬಾಡ ವನ್ನುತೊರೆದು ಕಾಗಿನೆಲೆಗೆ ಬಂದು ತನ್ನ ಆರಾಧ್ಯ ದೇವರಾದ ಆದಿಕೇಶವನ ಆರಾಧನೆ ಯಲ್ಲಿ ತೊಡಗಿದರು. ಕಾಗಿನೆಲೆಯಲ್ಲಿ ಆದಿಕೇಶವನ, ನರಸಿಂಹನ ದೇವಸ್ಥಾನಗಳನ್ನು ಕಟ್ಟಿಸಿ, ಇತಿಹಾಸ, ಪುರಾಣಗಳನ್ನು ಅಭ್ಯಾಸಮಾಡಿ ಕಾವ್ಯಗಳನ್ನು ರಚನೆ ಮಾಡಲು ಉದ್ಯುಕ್ತರಾದರು. ವ್ಯಾಸರಾಯರಲ್ಲಿ ದೀಕ್ಷೆ ತೆಗೆದುಕೊಂಡು ಕರ್ನಾಟಕ, ಆಂಧ್ರದೇಶಗಳಲ್ಲಿ ಸಂಚರಿಸಿ ಭಕ್ತಿ ಪಂಥವನ್ನು ಪ್ರಚಾರ ಮಾಡಿದರು. ಅನೇಕ ಕೀರ್ತನೆಗಳನ್ನು ರಚಿಸಿ, ಪುರಂದರ ದಾಸರ ಸಮಕಾಲೀನರಾಗಿ ಅವರ ಮೆಚ್ಚುಗೆ ಪಡೆದರು. ಕಾಗಿನೆಲೆಯಲ್ಲಿ ನೆಲೆಸಿ ಹರಿಭಕ್ತಿಸಾರ, ನಳ ಚರಿತ್ರೆ, ರಾಮಧಾನ್ಯ ಚರಿತ್ರೆ ರಚಿಸಿದರು. ಅವರು ಮೊತ್ತಮೊದಲನೆಯ ಕೃತಿಯೇ ''ಮೋಹನ ತರಂಗಿಣಿ''. ''ಕಾಗಿನೆಲೆ ಆದಿಕೇಶವ'' - ಎಂಬುದೇ ಅವರ ಅಂಕಿತ. ದಾಸಕೂಟದಲ್ಲಿ ವಿದುರನೇ ಕನಕನಾಗಿ ಕುರುಬರ ಕುಲದಲ್ಲಿ ಹುಟ್ಟಿದನೆಂದು ಅಭಿಪ್ರಾಯ. ಕವಿಕಾಳಿದಾಸ ಶಾಪಗ್ರಸ್ತನಾಗಿ ಕುರುಬರ ಕುಲದಲ್ಲಿ ಹುಟ್ಟಿದಂತೆ. ಅಂದಿನಿಂದ ಇಂದಿನವರೆಗೂ ಈ ಜನಾಂಗದವರು ವೈಷ್ಣವ ಭಕ್ತರು.

### ಮೋಹನ ತರಂಗಿಣಿ ಕಥಾವಸ್ತು

ತಮ್ಮ ಚೊಚ್ಚಲ ಕೃತಿ ಮೋಹನ ತರಂಗಿಣಿಯನ್ನು ರಚಿಸುವ ಮುನ್ನ ಈತನು ಮಹಾಭಾರತ ಮತ್ತು ಭಾಗವತ ಪುರಾಣಗಳಿಂದ ಕಾಮದಹನ, ಉಷಾನಿರುದ್ಧರ ವಿವಾಹ, ಕೃಷ್ಣ ಬಾಣಾಸುರರ ಯುದ್ಧ ಘಟ್ಟಗಳನ್ನೂ, ಸ್ಕಂದಪುರಾಣ, ಹರಿವಂಶಗಳಿಂದ ಆಯ್ದು ಕೊಂಡಿದ್ದಾನೆ. ತಾರಕಾಸುರನ ವಧೆ ಸ್ಕಂದ ಪುರಾಣದ ಪೂರ್ಣಪಾಠವಾದರೆ, ಮೋಹನ ತರಂಗಿಣಿಯ ಉತ್ತರಾರ್ಧವೆಲ್ಲಾ ಹರಿವಂಶ ಹಾಗೂ ವಿಷ್ಣುಪುರಾಣಗಳ ಕಥಾವಸ್ತುವಾಗಿದೆ. ಕನಕದಾಸರು ತಮ್ಮ ಕಾವ್ಯವನ್ನು ರಚಿಸುವ ಮುನ್ನ ತಮ್ಮ ಗುರು ತಾತಾಚಾರ್ಯರಿಗೆ ವಂದಿಸುತ್ತಾರೆ.

ಪೀಠಿಕೆಯಲ್ಲಿ ಮೊದಲಿನ ಪದ್ಯ ತಮ್ಮ ಆರಾಧ್ಯದೇವನಾದ ಕಾಗಿನೆಲೆ ಆದಿಕೇಶವನನ್ನು ಕುರಿತು ಕಾಗಿನೆಲೆಯ ರಂಗ ಎಂದು ಸ್ತುತಿಸುತ್ತಾ

ಶ್ರೀ ಗಿರಿಜೇಶ್ವರ ನಾತ್ಮಾಭಿರಾಮ ಸ
ದ್ವಾಗೀಶಪಿತ ಪರಂಧಾಮ
ಕಾಗಿನೆಲೆಯ ರಂಗ ಸುರ ಸಾರ್ವಭೌಮ ಸು
ತ್ಯಾಗಿ ಪಾಲಿಸೋ ಪೂರ್ಣಕಾಮ

- ಎರಡನೆಯ ಪದ್ಯದಲ್ಲಿ ವಿಶಿಷ್ಟಾದ್ವೈತ ಮತ ಸಂಸ್ಥಾಪಕರಾದ ರಾಮಾನುಜಾಚಾರ್ಯರನ್ನು ಕುರಿತು ಸ್ಮರಿಸುತ್ತಾ-

ಶ್ರೀ ಮದ್ಗುರುರಾಯ ದುರಿತ ವಿಜೇಯ ದು
ಷ್ಕಾಮ ವಿಚ್ಛೇದನಾಹ್ಲಾದ
ತಾಮಸ ಗುಣನಾಶ ಸಾತ್ವಿಕೋಲ್ಲಾಸ ಶ್ರೀ
ರಾಮಾನುಜಮುನಿ ಶರಣು

ಎಂಬುವುದಾಗಿ ಭಕ್ತಿಯಿಂದ ನಮಿಸಿದ್ದಾರೆ. ಮುಂದಿನ ಪದ್ಯದಲ್ಲಿ ರಾಮಾನುಜರ ವಿದ್ವತ್ತು ಮಹಿಮೆ, ಅವರ ಅಸಾಧಾರಣವಾದ ಪಾಂಡಿತ್ಯಗಳನ್ನು ಕೊಂಡಾಡಿ, ಮುಂದಿನ ಪದ್ಯದಲ್ಲಿ ತಿರುಮಲೆಯ ತಾತಾಚಾರ್ಯರಿಗೆ ನಮನ ಮಾಡಿ, ನಂತರ ಮುಂದಿನ ಪದ್ಯಗಳಲ್ಲಿ ಶ್ರೀಕೃಷ್ಣನ ಮಹಿಮಾ ವಿಶೇಷವನ್ನು ಸ್ತುತಿಸಿ ತಮ್ಮ ಕಾವ್ಯಕ್ಕೆ ಶ್ರೀಕೃಷ್ಣನ ಕೃಪೆಯನ್ನು ಕೋರಿ ಅವನ ಮಂಗಳವನ್ನು ಬೇಡಿದ್ದಾರೆ. ಕನಕರಿಗೆ ಶ್ರೀಕೃಷ್ಣನು ದೇವಾದಿದೇವನು, ರಸಿಕಪ್ರಿಯನು, ಶೃಂಗಾರ

ಸಾರ್ವಭೌಮನು. ಅವನು ತನ್ನ ಕೌಸ್ತುಭ ರತ್ನ ಕಿರಣಗಳ ಸಹಾಯದಿಂದಲೇ ಅರುಣಾಬ್ಜ ನಿಲಯದ ಬಾಗಿಲನ್ನುತೆರೆದು ಒಳಪೊಕ್ಕು ತರುಣಿ ಲಕ್ಷ್ಮಿಯ ಕುಚವಿಡಿದ ಕೈಯ್ಯಿಂದ ನಮಗೆಲ್ಲ ಸತ್ಕರುಣವನ್ನುನೀಡಲಿ ಎಂದು ಹೇಳಿ, ಮುಂದಿನ ಪದ್ಯಗಳಲ್ಲಿ ಚಮತ್ಕಾರವಾಗಿ, ಲಕ್ಷ್ಮಿಯನ್ನೂ ಕಾಶೀವಿಶ್ವನಾಥನನ್ನು, ಬ್ರಹ್ಮನನ್ನು, ಶಾರದೆ ಯನ್ನು, ಪಾರ್ವತಿಯನ್ನೂ, ವಿನಾಯಕನನ್ನೂ, ಗರುಡನನ್ನೂ, ಆದಿಕೇಶವನನ್ನೂ ಪ್ರಾರ್ಥಿಸಿ ಕೊಂಡು, ಅಗ್ನಿ, ವಾಯು, ವರುಣರನ್ನೂ ಮುಂದೆ ಭಕ್ತಶ್ರೇಷ್ಠರಾದ ಬಲಿ, ಪ್ರಹ್ಲಾದ, ನಾರದ, ವಿಭೀಷಣ, ಧ್ರುವ, ವಿದುರ, ಪುಂಡರೀಕ - ಮುಂತಾದ ಪ್ರಾತಃಸ್ಮರಣೀಯ ರಾದವರನ್ನು ಸ್ಮರಿಸಿ, ತಮ್ಮ ಕಾವ್ಯದ ಬಗ್ಗೆ ಬರೆ ಯುತ್ತಾರೆ. ವಡಿ ಪ್ರಾಸ ಗಣ ನೇಮ ಲಕ್ಷಣವು ಉಚಿತಾರ್ಥವಿಡಿಕಿರಿದಿರುವ ಭಾವ ಚಿತ್ರ ವೊದಲಾದ ಛಂದಸ್ಸಿನ ನಿಯಮಗಳಿಂದ ಕೂಡಿದ್ದೆಂದು ಹೇಳಿ ನುಡಿ ತಪ್ಪಿದರೆ ತಿದ್ದುವುದು ಸಂಗಡಿಗರು ಸಲೆ ಬಲ್ಲ ವಿದ್ವಾಂಸರು - ಎಂಬುವುದಾಗಿ ವಿನಯವಾಗಿ ಬೇಡಿದ್ದಾರೆ ಕನಕದಾಸರು. ತಮ್ಮ ಪಾಂಡಿತ್ಯ ಬಗ್ಗೆ ಹೇಳುವಾಗ ಒಮ್ಮೆ ಬರೆದ ಪದವನ್ನು ಅಳಿಸಿ ಬರೆಯದ ಕವಿತಾ ಪ್ರಾವೀಣ್ಯತೆ ತಮ್ಮದೆಂದು ಹೇಳಿಕೊಂಡಿದ್ದಾರೆ.

ಮೋಹನತರಂಗಿಣಿ ಕನಕದಾಸರು ಯೌವನದಲ್ಲಿ ರಚಿಸಿದ ಶೃಂಗಾರದ ಮಹಾಕಾವ್ಯ. ಕವಿಯ ಶೃಂಗಾರ ಸಾಹಿತ್ಯ ಪ್ರತಿಭೆಯನ್ನು ಈ ಕಾವ್ಯದಲ್ಲಿ ನಾವು ಕಾಣಬಹುದು. ಕವಿಯ ಮಾತಿನಲ್ಲಿ ರಸಿಕರ ಕರ್ಣಯುಗ್ಮವ ಪೊಕ್ಕು ಮುದದಿ ಗೆಣುಗೊಳ್ಳದ ಬೆಳ್ಗಬ್ಬಿನ ರಸದಂತೆ ಬಣ್ಣಿತವಾದ ಕಥಾಮೃತ - ರಸಪೂರಿತ ಸುಪ್ರಬಂಧ ವಿಲಕ್ಷಣ ವೆಸುವಂತೆ ಪೆಳ್ದಪೆನಿದನು - ಹಸನಾದುದೆಂದು ಯೋಗ್ಯರು ತಲೆದೂಗಲು ಉಸುರುವೆ ಹರಿಕೃಪೆಯಿಂದ. ಮೋಹನ ತರಂಗಿಣಿ ಶ್ರೀಹರಿ ಚರಿತೆ ಕೋಟಿ ಜನ್ಮದ ಪಾಪವನ್ನು ಪರಿಹರಿಸುವ ಈ ಕೃಷ್ಣ ಚರಿತೆ ಪೀಠಿಕೆ ಯೊಳಗೊಂದು ಪದನ ಪಠಿಸಿ ಕೇಳಿದ ಸುಜನರ್ಗೆ ಮುಕ್ತಿವನಿತೆಯ ಸಂಸರ್ಗ ದೊರಕುವುದು ಎಂದು ಕನಕದಾಸರು ಸಾರುತ್ತಾರೆ. ಮುಂದೆ ಕನಕದಾಸರು ಕೃಷ್ಣಕಥೆಯನ್ನು ತಮ್ಮ ಮಡದಿಗೆ ಹೇಳುತ್ತಾರೆ. ಈ ಕೃತಿಗೆ ಕರ್ತೃ ಕಾಗಿನೆಲೆಯಾದಿ ಕೇಶವನೆಂದು ತಿಳಿಸಿ ಸೌರಾಷ್ಟ್ರ ದೇಶದ ವರ್ಣನೆ - ದ್ವಾರಕಾ ಪುರವರ್ಣನೆ, ತರುವಾಯ ರುಕ್ಮಿಣಿಯ ಜಠರದಲ್ಲಿ ಕಂದರ್ಪನ ಜನನ ವೃತ್ತಾಂತ, ಪ್ರದ್ಯುಮ್ನನ ಜನನವಾದ ಹತ್ತು ದಿನಗಳಲ್ಲಿ ಅವನು ಮಾಯವಾದ ವಿಷಯ, ಮುಂದೆ ತಾರಕಾಸುರನ ಉಪಟಳವನ್ನು ತಡೆಯಲಾರದೆ ಬ್ರಹ್ಮನನ್ನು ಮುಂದೆ ಮಾಡಿಕೊಂಡು ಕ್ಷೀರ ಸಾಗರದಲ್ಲಿ ಆದಿ ಶೇಷನ ಮೇಲೆ ಮಲಗಿದ ವಾಸುದೇವನ ಚರಣ ಕಮಲಗಳನ್ನು ಅನೇಕ ಪ್ರಕಾರವಾಗಿ ಬ್ರಹ್ಮದೇವರು ಸ್ತುತಿಸುವ ಪರಿ ಕನಕದಾಸರ ಭಕ್ತಿ ಭಾವಕ್ಕೆ ಪೂರಕವಾಗಿದೆ - ನೋಡಿ :

ವೇದ ತಸ್ಕರ ಮಾನಮರ್ದನ ಜಯ ಜಯ
ಭೂಧರ ಧರ ಜಯ ಜಯತು
ಶ್ರೀ ಧರಣೀಧರ ಜಯ ಜಯ
ನಮೋ ಪ್ರಹ್ಲಾದ ವರದ ಜಯ ಜಯತು
ರಣಧೀರ ದಶಕಂಠ ಜಿತ ಕೀರ್ತಿಯುತ
ವಿಭೀಷಣ ಹಿತ ರಘುರಾಮ ಜಯತು
ಪ್ರಣವಗೋಚರ ನಿತ್ಯಮದನ
ಗೋಪಾಲ ಸದ್ಗುಣಶೀಲ ಶ್ರೀಕೃಷ್ಣ ಜಯತು

ಬ್ರಹ್ಮದೇವನ ಬಿನ್ನಪಕೆ ವಿಷ್ಣುವು - ಪರಶಿವನ ಪುತ್ರನಿಂದ ಮಾತ್ರ ತಾರಕಾಸುರನ ವಧೆ ಖಚಿತ. ಆದ್ದರಿಂದ ತಪಸ್ಸಿನಲ್ಲಿರುವ ಪರಶಿವನು ಪಾರ್ವತಿ ಯಲ್ಲಿ ಅನುರಾಗಗೊಳ್ಳಬೇಕು. ಅದಕ್ಕೆ ಮನ್ಮಥನು ತನ್ನ ಪ್ರೇಮ ಕಾಮ ಬಾಣಗಳನ್ನು ಪ್ರಯೋಗಿಸಬೇಕೆಂದು - ತಿಳಿಸಿದನು. ಬ್ರಹ್ಮದೇವನ ಅಣತಿಯಂತೆ ಬೃಹಸ್ಪತಿಯು ಕಾಮದೇವನ ಕುಸುಮಾವತಿಗೆ ಬಂದು ಅವನಿಗೆ ದೇವತೆಗಳ ಆಸೆಯನ್ನು, ಬ್ರಹ್ಮದೇವರ ಅಪ್ಪಣೆಯನ್ನೂ ತಿಳಿಸಿದನು.

ಕುಸುಮಾವತಿಯ ರಮ್ಯ ವರ್ಣನೆ ಕನಕದಾಸರ ಕಾವ್ಯಸಂಪಲ್ಲಕ್ಷ್ಮಿಗೆ ಕಿರೀಟ ಪ್ರಾಯವಾದದ್ದು. ಅಲ್ಲಿನ ಚೆಲುವೆಯರ ಸೌಂದರ್ಯ ಸವಿಯುವ ಬೃಹಸ್ಪತಿ, ಕಾಮನಿದ್ದ ಸ್ಥಳಕ್ಕೆ ಬಂದಾಗ ಅಲ್ಲಿನ ವರ್ಣನೆ ಮಾಡುವಾಗ ನಯನ ಮನೋಹರವಾಗಿ ಸಂಚರಿಸುವ ರಾಜ ಹಂಸಗಳ ಇಂಚರ, ಪಾಡುವ ಪೆಣ್ದುಂಬಿ ನರ್ತಿಪನವಿಲು, ಕೊಂಡಾಡುವ ಜಾಣ್ನುಕ್ಕಿ ಪತಿಯನ್ನು ಬೇಡುವ ಗಿಳಿವಿಂಡು. ಮನ್ಮಥನ ಸುಂದರದೇಹ ವರ್ಣನೆ, ಕಾಮನೊತ್ತಿನಲ್ಲಿ ಕಂಗೊಳಿಸುವ ಕಸ್ತೂರಿ ಸುಗಂಧ, ಕಾಮಿನಿಯರ ಹಿಂಡು - ಮುಂತಾದ ವರ್ಣನೆಗಳು ಮುಂದೆ ಕವಿ ಕನಕದಾಸ ಪೂರ್ಣ ಪುರಾಣ ಪ್ರಜ್ಞೆಯಿಂದ ವರ್ಣಿಸುವ ಮನ್ಮಥನ ದಂಡಯಾತ್ರೆ. ಕಾಮದಹನ, ರತಿಯಪ್ರಲಾಪ, ಶಂಬರಾಸುರರ ಸಂಧಾನ. ಮಾರಜನನ. ಶಂಭರಾಸುರನ ವಧೆ - ಇತ್ಯಾದಿಗಳಲ್ಲಿ ಕಾವ್ಯ ಪ್ರತಿಭೆಗಳನ್ನು ನಾವು ಕಾಣಬಹುದು. ಶಿವಪುರಾಣದ ಪಾರ್ವತಿ ಖಂಡದ-

ಚಂದಸ್ಯ ವಿಶದಾ ಕಾಂತಿರ್ವಿಕೀರ್ಣಾ ಹಿ
ಸಮಂತತಪಿ ಮೀನಾಂ ಕಾಮಿನೀನಾಂ ಚ
ದೂತಿಕಾ ಇವ ಸಾ ಭವತ್

ಎಂಬುವ ಭಾಗವನ್ನು ಕನಕದಾಸರು ತಮ್ಮ ಮೋಹನತರಂಗಿಣಿಯಲ್ಲಿ -

ಹುತವಹನೇತ್ರನಿರ್ದಟವಿಯ ಕಂಡು ಮ
ನ್ಮಥ ಮಹೀರಮಣ ಮುಂಕೊಂಡು
ಕೃತಕ ದಿಂದೊಳ ಪುಗಿಸಿದ ಬೇಗವರ ಚೈತ್ರ
ರಥ ಚಂದ್ರ ಮಂದಾನಿಲರನು

ಎಂಬುವುದಾಗಿ ವರ್ಣಿಸಿದ್ದಾರೆ. ಶಿವ ಪುರಾಣದ ಶಂಬರಾಸುರನ ಪ್ರಸಂಗವನ್ನು ಯಥಾವತ್ತಾಗಿ ಬಳಸಿಕೊಂಡು ವಿಷ್ಣುಪುರಾಣ. ಭಾಗವತ ಹರಿವಂಶಗಳ ನೆರವಿನಿಂದ ತಮ್ಮ ಕಾವ್ಯವನ್ನು ವಿಸ್ತರಿಸಿದ್ದಾರೆ. ನವರಸಗಳನ್ನು ಉಪಯೋಗಿಸುವುದರಲ್ಲಿ ಈತ ಜಾಣರು. ಉಷಾದೇವಿಯ ಶೃಂಗಾರವನ್ನು ಕಂಡಂತೆಯೇ ಕೃಷ್ಣನ ಜಲಕ್ರೀಡೆ ಪ್ರಸಂಗದಲ್ಲಿ ಹಾಸ್ಯ ಶೃಂಗಾರವನ್ನು ನಾವು ಕಾಣಬಹುದು. ಕರುಣಾರಸಕ್ಕೆ ಶಂಬರಾಸನು ಮನ್ಮಥನನ್ನು ಕದ್ದಾಗ ರುಕ್ಮಿಣಿಯ ವಿಲಾಪ ನಿದರ್ಶನ. ರತಿಯ ವಿಲಾಪ ಶೋಕರಸ - ರೌದ್ರ ವೀರ ಭಯಾನಕರಸಗಳಿಗೆ ಮನ್ಮಥನ ದಹನ, ರುದ್ರ ನಿಂದ ಆದ ಸಂದರ್ಭದಲ್ಲಿ ಕಾಣಬಹುದು. ಕನಕದಾಸರು ಭಕ್ತ ಕವಿಯಾದ್ದರಿಂದ ನಲವತ್ತೆರಡು ಸಂಧಿಗಳ ಮೊದಲ ಪದ್ಯಗಳಲ್ಲಿ ಭಾಗವತದ ಕಥೆಯನ್ನು ಭಕ್ತಿ ಪೂರ್ವಕವಾಗಿ ಹೇಳಿಕೊಂಡು ಹೋಗಿದ್ದಾರೆ.








# ಶ್ರೀ ವೆಂಕಟೇಶ್ವರಸ್ವಾಮಿ ನವರಾತ್ರಿ ಬ್ರಹ್ಮೋತ್ಸವಗಳು





# ನವರಾತ್ರಿ ಬ್ರಹ್ಮೋತ್ಸವದ ವಿವಿಧ ವಾಹನಸೇವೆ

















## ಸುದ್ದಿ ಚಿತ್ರಗಳು

ಬಾಲಾಲಯದಲ್ಲಿಸ್ವಾಮಿ.

ಬಾಲಾಲಯ ಪೂಜೆ.

ವೇದಾಶೀರ್ವಚನ ಪಡೆದ ಶ್ರೀ ಬಾಲಯೋಗಿ

ವೇದಾಶೀರ್ವಚನ ಪಡೆದ ಶ್ರೀ ದಂಡು ಶಿವರಾಮರಾಜು

ಸರ್ವೋಚ್ಚನ್ಯಾಯಾಲಯದ ನ್ಯಾಯಮೂರ್ತಿ ಶ್ರೀ ಎ. ಎಸ್. ಆನಂದ್

ಆಂಧ್ರಪ್ರದೇಶದ ಹೈಕೋರ್ಟ್ ನ್ಯಾಯಾಧೀಶ ಶ್ರೀ ಸತ್ಯಬ್ರತಸಿನ್ಹ













## ಸುದ್ದಿ ಚಿತ್ರಗಳು

ವರ್ಷ ತ್ರಸ್ತರಿಗೆ ಶ್ರೀವಾರಿ ಸೇವೆ.
ಆಸ್ಥಾನ ಮಂಟಪದಲ್ಲಿ ಕಾರ್ಯಕ್ರಮ
ಸಿಬ್ಬಂದಿ ತರಬೇತಿ ಪ್ರಮಾಣ ಪತ್ರ ವಿತರಣೆ.

ಆಹಾರದ ಚೀಲಗಳ ನಿರ್ವಹಣೆ.
ತಿರುಪತಿಯಲ್ಲಿ ಹಾಲಿನ ವಿತರಣೆ.
ತುಂಬಿದ ಕಲ್ಯಾಣಿ ಡ್ಯಾಂ ದೃಶ್ಯ.

## ಶ್ರೀಕೃಷ್ಣ ಚರಿತೆ

ಕನಕದಾಸರು ಮೋಹನ ತರಂಗಿಣಿಯಲ್ಲಿ ಶ್ರೀಕೃಷ್ಣ ಚರಿತೆಯನ್ನು ಸವಿಸ್ತಾರವಾಗಿ ಹೇಳುವ ಉದ್ದೇಶದಿಂದಲೇ ಕಾವ್ಯ ರಚನೆ ಮಾಡಿರಬೇಕು. ಶ್ರೀಕೃಷ್ಣನ ಸಂವಾದ, ಶ್ರೀಕೃಷ್ಣನ ಮಹಿಮೆಗಳನ್ನು ಸ್ತುತಿಸುವ ಭಾಗಗಳು ಶೃಂಗಾರ ಭಕ್ತಿ ಮಹೋನ್ನತಿಗಳನ್ನು ಇಲ್ಲಿ ನಾವು ಅಪಾರವಾಗಿ ಕಾಣಬಹುದು. ಕೃಷ್ಣನು ಎಲ್ಲರಲ್ಲೂ ಕಲೆತು ಆನಂದಿಸುವ ಸನ್ನಿವೇಶಗಳನ್ನು ಹೃದಯಂಗಮ ವಾಗಿ ಚಿತ್ರಿಸಿದ್ದಾರೆ. ಎಲ್ಲರಿಗೂ ತನ್ನ ಸಾಮೀಪ್ಯ ಸಾಯುಜ್ಯಗಳನ್ನಿತ್ತು ನಕ್ಕು ನಗಿಸಿ ಆನಂದ ವನ್ನೀಯುವ ದೃಶ್ಯಗಳನ್ನು ಸೃಜಿಸಿ ಕವಿ ತನ್ನ ಪ್ರೌಢಿಮೆಯನ್ನುತೋರಿಸಿದ್ದಾರೆ. ಗೋಕುಲದ ಗೋಪ ಗೋಪಿಯರ ಚೆಲುವಿನ ತಾಣ ಕೃಷ್ಣನಿಗೆ ಆಮೋದನ. ಸುಂದರ ಸ್ತ್ರೀಯರ ಸುಖ ಕಥಾಲಾಪ ಕೃಷ್ಣಭಕ್ತಿಗೆ ಪೂರಕವಾಗಿವೆ. ಜಲ ಕ್ರೀಡೆಯ ಘಟ್ಟದಲ್ಲಿ ಕಾಮದೇವ ರತಿದೇವರ ವಿವಾಹ. ನಂತರ ಎಲ್ಲರೂ ಭೋಜನ ಶಾಲೆಗೆ ತೆರಳಿದರು. ಶ್ರೀಕೃಷ್ಣನು ರುಕ್ಮಿಣಿ ಸತ್ಯಭಾಮೆಯ ರೊಂದಿಗೆ ಭೋಜನ ಶಾಲೆಗೆ ಬರಲು ಅಲ್ಲಿ ಶ್ರೀಕೃಷ್ಣನ ಪಾದ ತೊಳೆದು ಊಟಕ್ಕೆ ಎಲ್ಲರೂ ಕುಳಿತರು. ಊಟದ ಸವಿಯನ್ನು ಕವಿ ವರ್ಣಿಸಿದ್ದಾರೆ - ನವರತ್ನ ಖಚಿತವಾದ ಅಡ್ಡಣಿಗೆಯನ್ನಿಟ್ಟು ಅದರ ಮೇಲೆ ಹೊನ್ನ ಹರಿವಾಣ, ಅನೇಕ ಸತ್ ಪರಿಕರಗಳನ್ನು ಬಡಿಸಿದರು; ಬೋನಗಿತ್ತಿಯರು. ರಾಜಾನ್ನ, ತುಪ್ಪ, ಪಾಯಸ, ಕಜ್ಜಾಯ, ಮೊಸರನ್ನ, ಭಕ್ಷ್ಯ ಭೋಜ್ಯಗಳನ್ನು ಬಡಿಸಿದರು. ಕೃಷ್ಣನು ತನ್ನ ಪರಿವಾರದೊಡನೆ ಊಟಮಾಡಲು ಎಲ್ಲರೂ ಕೃಷ್ಣಾರ್ಪಣವೆಂದು ತಿಂದು ತೇಗಿದರು. ತರುವಾಯ ಭೋಜನಶಾಲೆಯಿಂದ ಚಂದ್ರಕಾಂತದ ಕ್ರೀಡಾ ಕೊಳಕ್ಕೆ ಬಂದರು. ಹೊನ್ನಮಯವಾದ ಕಂಬಗಳ ಪುತ್ಥಳಿಗಳ ವರ್ಣನೆ, ನೀರಾಟದ ಅದ್ಭುತ ದೃಶ್ಯ, ಹೊನ್ನ ಕೊಡದ ಸ್ತ್ರೀಯರು ಓಕಳಿಯನ್ನು ಆಡುತ್ತಾ ''ವಿಧಿ ಭವೇಂದ್ರಾದಿ ನಿರ್ಝರರನ್ನು ಕಟ್ಟಿ ಆಳುವ ಶ್ರೀಕೃಷ್ಣ, ನಿನಗೆ ಇದು ಪಟ್ಟಾಭಿಷೇಕ'' ಎಂದು ನುತಿಸಿದರು. ಅನಿರುದ್ಧನ ಜನನ. ಶ್ರೀಕೃಷ್ಣ ಬಾಣಾಸುರರ ಕಾಳಗ, ಕೃಷ್ಣನು ಉಷಾ ಅನಿರುದ್ಧರ ವಿವಾಹವನ್ನು ಏರ್ಪಡಿಸಿದ್ದು, ದ್ವಾರಕೆಗೆ ಹಿಂತಿರುಗಿದ್ದು - ಎಲ್ಲಾಕಡೆ ಶ್ರೀಕೃಷ್ಣ ಗಾನಾಮೃತ. ಶಿವನು ಬಾಣಾಸುರನನ್ನು ಕರೆದುಕೊಂಡು ಕೈಲಾಸಕ್ಕೆ ತೆರಳಲು ಬಾಣಾಸುರನ ಮಂತ್ರಿಗಳು ಶ್ರೀಕೃಷ್ಣನ ಪಾದ ತೊಳೆದು ಅವನನ್ನು ನುತಿಸುವ ಪದ್ಯದ ಭಕ್ತಿ ಭಾವ ಹೀಗಿದೆ -

ಬಾಣನ ಪಿತ ಗರ್ವ ಪರ್ವತ ಜಿತು ವಜ್ರ
ಬಾಣಾಸುರನಾಥ ಜೇತ
ಬಾಣನ ಬಾಹುವಿಚ್ಛೇದ ಹಲ್ಲಾದ ಪೂ
ಬಾಣನ ಪಿತ ಕೃಷ್ಣ ಶರಣು
ಅಸುರ ಹಿರಣ್ಯಾಂಬಕ ಹಿರಣ್ಯ ಕಶಿಪು
ದಶಕಂಠ ಕುಂಭಕರ್ಣಾದಿ
ಶಿಶುಪಾಲ ದಂತ ವಕ್ತ್ರಾಂತಕ ಬ್ರಹ್ಮಾಂಡ
ಬಸುರಾಂತ ಶ್ರೀಕೃಷ್ಣ ಶರಣು

ದೈತ್ಯ ಕುಂಬಾಂಡನು ಶ್ರೀಕೃಷ್ಣನ ಪಾದಗಳಿಗೆ ನಮಿಸಿ ಸ್ತುತಿಸುವ ಪದ್ಯಗಳು ಭಕ್ತಿಯ ಪರಮ ಸೋಪಾನದ ಮೆಟ್ಟಲುಗಳು. ಆ ಪದ್ಯಗಳ ಸವಿ ಸಾಸಿರನಾಮಕ್ಕೆ ಸಮ. ಪರಮಾತ್ಮನಿಗೆ ಮುಗಿದಕೈ ಪವಿತ್ರ. ನೋಡುವ ಕಣ್ಣು ಸುಕೃತ. ಕೃಷ್ಣ ನಾಮ ನಾಲಿಗೆಗೆ ಪುಣ್ಯಪ್ರದ. ನಾಮ ಸ್ಮರಣೆ ಕೇಳುವಿಕೆ ಕಿವಿಗೆ ಕರ್ಣಾಮೃತ. ಕೃಷ್ಣ ಕೃಷ್ಣ ಎಂದೊಮ್ಮೆ ಸ್ಮರಿಸಿದರೆ ಸಾಕು ಮೋಕ್ಷ ಪ್ರಾಪ್ತಿ. - ಎಂಬುವುದಾಗಿ ಕುಂಬಾಂಡನ ಸ್ತೋತ್ರಾವಳಿ ಸರಣಿ ಹೀಗಿದೆ-

ದೃಢಭಕ್ತಿಯಲಿ ನಿಂದಿರ್ದ ತಾವಿಗೆ ಕೂರ್ತು
ನಡೆ ದಂಘ್ರಿ ಯುಗ ಪವಿತ್ರ
ಪೊಡಮಟ್ಟ ಹಸ್ತ ಮಸ್ತಕ ಬಹು ಪುಣ್ಯವ
ಪಡೆವುವು ಪರಮಾತ್ಮಕನೆ
ನೋಡಲು ದೃಕ್ಪುಣ್ಯ ಪಿರಿದು ಸಂತಸದಿ ಕೊಂ
ಡಾಡಲು ಜಿಹ್ವೆ ಪವಿತ್ರ
ಹಾಡ ಕೇಳಲು ಕರ್ಣದೊಳಿರ್ದ ಪಾತಕ
ಓಡುವುದಿಳೆಯ ಜೀವರಿಗೆ
ಮರಣಕಾಲದೆ ಕೃಷ್ಣಕೃಷ್ಣ ಕೃಷ್ಣಾಯೆಂಬ
ಸ್ಮರಣೆ ಯೊಂದಿರೆ ಮೋಕ್ಷವಹುದು
ಶರಣಾದ ದ್ವಿತೀಯಾಕ್ಷರದ ಲಗ್ಗವನಾಂತ
ಚರಣಾ ನ್ವಿತ ಕೃಷ್ಣ ಜಯತು
ಕಾಶಿಯ ಸ್ಥಲದಲಿ ಶಿವ ಸಮಸ್ತರಿಗುಪ
ದೇಶಿಸುವುದು ನಿನ್ನ ನಾಮ
ದೋಷಿಗಳಿದನರಿಯದೆ ಕೆಟ್ಟರು
ಪುಣ್ಯ ರಾಶಿ ನಾರಾಯಣ ಜಯತು

ಕವಿ ತನ್ನ ಕಾವ್ಯದಲ್ಲಿ ಶಿವನಾರಾಯಣರಿಗೆ ತಾರತಮ್ಯವಿಲ್ಲ. ಭೇದವೆಣಿಸುವವರು ನರಕಕ್ಕೆ ಹೋಗುತ್ತಾರೆ ಎಂಬುವುದಾಗಿ ವಿಷ್ಣುಪುರಾಣದ ತತ್ವವನ್ನು ಅಲ್ಲಲ್ಲಿ ಚೆನ್ನಾಗಿ ಬೋಧಿಸಿದ್ದಾರೆ.

**ಮೋಹನತರಂಗಿಣಿಯ ಪುರಾಣಪ್ರಜ್ಞೆ:**

ಕನಕದಾಸರೇ ತಮ್ಮ ಕಾವ್ಯವು ಶ್ರೀಕೃಷ್ಣ ಚರಿತೆ ಎಂದು ಕರೆಯುವಾಗ-

ಪೂಸರದಹನ ಕಾಮೋತ್ಪತ್ತಿ ವರಶಂಬ
ರಾಸುರವಧೆ ಕಂತು ಸುತನ
ಭಾಸುರ ಲೀಲೆ ಬಾಣನ ಗೆದ್ದ ಜಯ ಲ
ಕ್ಷ್ಮೀಶನ ಕೃತಿಯ ವರ್ಣಿಪೆನು

ಎಂಬುವುದಾಗಿ ಪೀಠಿಕೆಯಲ್ಲಿ ಹೇಳಿದ್ದಾರೆ. ಪುರಾಣಗಳ ವ್ಯಕ್ತಿಗಳನ್ನೇ ಆರಿಸಿಕೊಂಡು ತನ್ನ ಕವಿತಾ ಪ್ರತಿಭೆಯಿಂದ ಪಾತ್ರಗಳನ್ನು ಸೃಷ್ಟಿಸಿಕೊಂಡು ತನ್ನ ವರ್ಣನಾವೈಖರಿ ಪದ ಲಾಲಿತ್ಯಗಳಿಂದ ಕಾವ್ಯಕ್ಕೆ ಸೊಬಗನ್ನು ತುಂಬಿದ್ದಾರೆ. ನೈಜ ಜೀವನ ದೃಶ್ಯ ಕಾವ್ಯದ ಮೆರಗು - ಮೋಹನ ತರಂಗಿಣಿಯ ತಾರಕಾಸುರನ ವೃತ್ತಾಂತ. ಕಾಮದಹನ - ರತಿಯು ಶಂಬರಾಸುರನನ್ನು ತಿರಸ್ಕರಿಸಿದ್ದು, ಶಿವನು ರತಿ ಮನ್ಮಥರನ್ನು ಮಿಳನಗೊಳಿಸಿದ್ದು, ಸ್ಕಂದ ಪುರಾಣದ ಮಾಹೇಶ್ವರ ಖಂಡ, ಕೇದಾರ ಖಂಡ ಅಧ್ಯಾಯ 20-21 ಹಾಗೂ ಕೌಮಾರಿಕಾ ಖಂಡ ಅಧ್ಯಾಯ 24 ಗಳನ್ನು ಬಳಸಿ ಕೊಂಡಿದ್ದಾರೆ.

ಶ್ರೀಕೃಷ್ಣನ ಮೊಮ್ಮಗನಾದ ಅನಿರುದ್ಧನು ಬಾಣಾಸುರನ ಮಗಳಾದ ಉಷೆಯೊಡನೆ ರಹಸ್ಯವಾಗಿ ವಿಹರಿಸುತ್ತಿರುವುದನ್ನು ಕಂಡ ಬಾಣಾಸುರನು ಅನಿರುದ್ಧನನ್ನು ಬಂಧನದಲ್ಲಿಟ್ಟ ಘಟ್ಟ, ಶ್ರೀಕೃಷ್ಣನು ಬಾಣಾಸುರನ ಮೇಲೆ ಯುದ್ಧಮಾಡಲು ಹೋಗಲು ಅಲ್ಲಿ ಕೃಷ್ಣ ಬಾಣಾಸುರರ ಕಾಳಗ, ಅನಿರುದ್ಧನ ಬಂಧವಿಮೋಚನೆ, ಮಹಾಭಾರತದ ಸಭಾ ಪರ್ವ ಅಧ್ಯಾಯ 67 ರ ಅನುವಾದ - ಭಾಗವತದ 10 ನೇ ಸ್ಕಂದ 55, 62, 63 ಅಧ್ಯಾಯಗಳಲ್ಲಿ ಬರುವ ಪ್ರದ್ಯುಮ್ನನ ಜನನ,

ಉಷೆಯ ಪ್ರೇಮ ಪ್ರಕರಣಗಳು, ಬಾಣಾಸುರನ ಕಾಳಗ - ಇವುಗಳನ್ನು ತನ್ನ ಕಾವ್ಯದಲ್ಲಿ ಬಣ್ಣಿಸಿದ್ದಾರೆ. ಹರಿವಂಶದ ವಿಷ್ಣುಪರ್ವ ಅಧ್ಯಾಯ 104-128 ಮತ್ತು ವಿಷ್ಣುಪುರಾಣದ ಅಧ್ಯಾಯ 26-33 ಪ್ರದ್ಯುಮ್ನನ ಜನನ, ಶಂಬರನು ಮಗುವನ್ನು ಅಪಹರಿಸಿ ಸಮುದ್ರಕ್ಕೆ ಬಿಸಾಡಿದಾಗ, ಮೀನು ಮಗುವನ್ನು ನುಂಗಲು ಶಂಬರಾಸುರನ ಹೆಂಡತಿ ಮಾಯಾವತಿಗೆ ಆ ಮೀನು ಸಿಕ್ಕಿ ನಾರದರ ಮುಖಾಂತರ ಆ ಮಗುವನ್ನು ಕಾಪಾಡಲು ತಿಳಿಸಿದ ಪ್ರಸಂಗಗಳು, ಕವಿ ತನ್ನ ಕಾವ್ಯದಲ್ಲಿ ಅಳವಡಿಸಿಕೊಂಡಿದ್ದಾರೆ. ಬಾಣಾಸುರನ ಶಿವಪೂಜೆ ವಿಶಿಷ್ಟವಾಗಿದೆ. ಪೂಜಾ ವೇಳೆಯಲ್ಲಿ ಅವನು ಅನುಸರಿಸುವ ಮನಸ್ಸಿನ ಏಕಾಗ್ರತೆಗೆ ಫಲ ಅವನು ಸಹಸ್ರಬಾಹುಗಳನ್ನು ಪಡೆಯಲು ಸಾಧ್ಯವಾಯಿತಂತೆ. ನಾಮ ಜಪವ ಮಾಡುವಾಗ ಜಪಮಾಲೆಯನ್ನು ಉಪಯೋಗಿಸುವಾಗ ಅವನ ಹೃದಯದಲ್ಲಿ ಶಿವನು ನೆಲೆಸಿದ ಸನ್ನಿವೇಶವನ್ನು ಕವಿ -

ಅಲಿಗಳೆವೆಯಲುಗದೆ ಬಕುತಿಯಲಿ ತ್ರಿ
ಶೂಲಿಯ ಮೇಲೆ ಕಣ್ಮನವ
ಕೀಲಿಸಿದನು ಕೀಳದಂತೆ ಹಸ್ತದಿ ಜಪ
ಮಾಲಿಕೆಯನು ತುಡುಕಿದನು

ಮೋಹನ ತರಂಗಿಣಿಯ ಭಾಷಾಶೈಲಿ, ಛಂದಸ್ಸು, ಅಲಂಕಾರ ವರ್ಣನೆಗಳು, ಅಧ್ಯಯನ ಮಾಡಲು ಉತ್ತಮ ಕಾವ್ಯವಾಗಿದೆ. ನಡುಗನ್ನಡದ ಆಡು ಭಾಷಾ ಶೈಲಿ ಮನೋಹರವಾಗಿದೆ. ಉಪಮಾನ ಉಪಮೇಯಗಳು ಕಾವ್ಯದಲ್ಲಿ ಅಪಾರವಾಗಿವೆ. ಕವಿ ಭಕ್ತ ಕನಕದಾಸರು ತಮ್ಮ ಕಾವ್ಯವನ್ನು ಓದುವವರಿಗೆ ಸಿಗುವ ಫಲವನ್ನು ಹೇಳುತ್ತಾ ಕಾವ್ಯವನ್ನು ಮುಗಿಸುವಾಗ-

ನಿರ್ಮತ್ಸರದೊಳೀ ಕೃತಿಯ ಕೇಳ್ದವರಿಗೆ
ಧರ್ಮಾರ್ಥ ಕಾಮ ಮೋಕ್ಷಗಳ
ಭರ್ಮಾಂಬರ ನೀವ ಭಾಮೆ ಕೇಳ್ ನಮ್ಮದು
ಷ್ಕರ್ಮ ವಿಚ್ಛೇದನ ವಾಯ್ತು
ವರಮೋಹನ ತರಂಗಿಣಿಯೆಂಬ ಕಾವ್ಯದ
ಬರೆದೋದಿ ಕೇಳಿದ ಜನರ
ತರಣಿ ಚಂದ್ರಮರುಳ್ಳನಕ ಸತ್ಪುಪೆಯಿತ್ತು
ಪೊರೆವ ಲಕ್ಷ್ಮೀ ಕಾಂತ ಬಿಡದೆ

- ಎಂಬುವುದಾಗಿ ಹೇಳಿದ್ದಾರೆ.

★★★★★

# ಮಣವಾಳ ಮಾಮುನಿ

- ಎಂ. ಎ. ಸಿಂಗಮ್ಮ.

ಗುರುಪರಂಪರೆಯ ಪ್ರಕಾರ ರಾಮಾನುಜರ ಕಾಲವಾದ ಮೇಲೆ ಎಂಬಾರ್‌ರವರು, ಅನಂತರ ಅವರ ಶಿಷ್ಯರಾದ ಕೂರತ್ತಾಳ್ವಾನ್‌ವರ ಕುಮಾರರಾದ ಪರಾಶರ ಭಟ್ಟರು ಆಸ್ಥಾನಕ್ಕೆ ಬಂದರು. ಮುಂದೆ ಅವರ ಶಿಷ್ಯರಾದ ನಂಜೀಯರೂ, ಅವರ ಅನಂತರ ಅವರ ಶಿಷ್ಯರಾದ ನಂಬಿಳ್ಳೆಯವರೂ, ಅವರ ಅನಂತರ ಅವರ ಶಿಷ್ಯರಾದ ವಡಕ್ಕು ತಿರುವೀಧಿ ಪಿಳ್ಳೈಯವರೂ, ಅವರ ಅನಂತರ ಅವರ ಶಿಷ್ಯರಾದ ಪಿಳ್ಳೈ ಲೋಕಾಚಾರ್ಯರೂ, ಅವರ ಅನಂತರ ಅವರ ಶಿಷ್ಯರಾದ ತಿರುವಾಯ್ಮೊಳಿ ಪಿಳ್ಳೈಯವರೂ ಆಸ್ಥಾನಕ್ಕೆ ಬಂದರು. ಕೊನೆಯಲ್ಲಿ ಮಣವಾಳ ಮಾಮುನಿಗಳು ಆಚಾರ್ಯ ಪದವಿಯನ್ನು ವಹಿಸಿಕೊಂಡರು. ಇವರಿಗೆ ವರವರಮುನಿ ಎಂದೂ ಹೆಸರು ಉಂಟು.

ರಾಮಾನುಜಾಚಾರ್ಯರ ಕಾಲದಲ್ಲಿ ಶ್ರೀವೈಷ್ಣವರಿಂದ ಕೂಡಿದ್ದ ದೇಶವು ಕಾಲಕ್ರಮದಲ್ಲಿ ಅವರಿಂದ ಕಮ್ಮಿಯಾಗುತ್ತಾ ಬಂದಿತು. ಇದನ್ನು ನೋಡಿದ ಭಗವಂತನು ಮತ್ತೆ ದೇಶದಲ್ಲಿ ಶ್ರೀವೈಷ್ಣವತೆಯನ್ನು ತರಲು ತಿರುವನಂತಾಳ್ವಾನ್ ಎಂಬುವರನ್ನು ಭೂಲೋಕದಲ್ಲಿ ಹುಟ್ಟುವಂತೆ ನಿಯಮಿಸಿದನು. ಅವನ ನಿಯಮನದಂತೆ ಅವರು ಆಳ್ವಾರ್ ತಿರುನಗರಿಯಲ್ಲಿದ್ದ ತಿರುನಾವಿರುಡೈಯ ಪಿರಾನ್ ದಾಸರಣ್ಣರವರಿಗೆ ಸಾಧಾರಣ ಸಂವತ್ಸರದಲ್ಲಿ ತುಲಾಮಾಸದಲ್ಲಿ ಶುಕ್ಲಪಕ್ಷ ಚತುರ್ದಶಿ ಗುರುವಾರ ಮೂಲಾ ನಕ್ಷತ್ರದಲ್ಲಿ ಕುಮಾರರಾಗಿ ಜನಿಸಿದರು. ಇವರಿಗೆ ಇವರ ತಂದೆ ಜಾತಕರ್ಮಾದಿಗಳನ್ನು ಮಾಡಿ, ತಮ್ಮ ದೇವರಾದ ಶ್ರೀರಂಗನಾಥನ ಹೆಸರನ್ನೇ ಇಡಬೇಕೆಂದು ಇಚ್ಛಿಸಿ ''ಅಳಹಿಯಮಣವಾಳನ್'' ಎಂದು ನಾಮಕರಣವನ್ನು ಮಾಡಿದರು. ಕಾಲಕ್ರಮದಲ್ಲಿ ಇವರಿಗೆ ಚೌಲೋಪನಯನಗಳೆಲ್ಲಾ ನಡೆದು ಅವರ ತಂದೆಯು ಅವರಿಗೆ ವೇದ ಶಾಸ್ತ್ರಾರ್ಥಗಳಲ್ಲಿಯೂ, ದರ್ಶನ ರಹಸ್ಯಾರ್ಥಗಳಲ್ಲಿಯೂ ಪಾಂಡಿತ್ಯವನ್ನು ಉಂಟುಮಾಡಿದರು. ಅನಂತರ ಇವರಿಗೆ ಹದಿನಾರನೆಯ ವಯಸ್ಸಿನಲ್ಲಿಯೇ ವಿವಾಹವೂ ನಡೆಯಿತು. ಕಾಲಕ್ರಮದಲ್ಲಿ ಇವರ ತಂದೆಯವರು ದೇವರ ಪಾದಾರವಿಂದವನ್ನು ಸೇರಲು ಇವರು ಅವರ ಚರಮ ಕೈಂಕರ್ಯಗಳನ್ನು ಬ್ರಹ್ಮಮೇಧವಿಧಿಯನ್ನು ಅನುಸರಿಸಿ ಸಾಂಗವಾಗಿ ನೆರವೇರಿಸಿದರು.

ತಿರುಮಲೈ ಆಳ್ವಾರ್‌ರವರು ಈಡು ಮುಪ್ಪತ್ತಾರಾಯಿರ ಪಡಿಯ ವ್ಯಾಖ್ಯಾನಗಳನ್ನು ಎಲ್ಲರಿಗೂ ಉಪದೇಶಿಸುತ್ತಾ ತಿರವಾಯ್ಮೊಳಿಪಿಳ್ಳೈ ಎಂಬ ಹೆಸರು ಪಡೆದರು. ಅವರ ಪ್ರಸಿದ್ಧಿಯನ್ನು ಅರಿತ ಅಳಹಿಯ ಮಣವಾಳರು ಅವರ ಹತ್ತಿರ ದಿವ್ಯಪ್ರಬಂಧಗಳನ್ನು ವ್ಯಾಸಂಗಮಾಡಿದರು. ತಿರುವಾಯ್ಮೊಳಿ ಪಿಳ್ಳೈ ಯವರು ಇವರಿಗೆ ಉಡೈಯವರ ಶ್ರೀಪಾದಗಳಲ್ಲಿಯೇ ಭಕ್ತಿಯನ್ನು ಹೊಂದಿರಬೇಕೆಂದು ಬೋಧಿಸಿ ಆಳ್ವಾರ್ ತಿರುನಗರಿಯಲ್ಲಿ ಉಡೈಯವರಿಗೆ ದೇವಸ್ಥಾನವನ್ನು ಕಟ್ಟಿಸಿದರು. ಅವರ ನಿಯಮನದಂತೆ ಅಳಹಿಯ ಮಣವಾಳರು ಉಡೈಯವರಲ್ಲಿ ಬಹಳ ಪ್ರಪತ್ತಿಯನ್ನು ಹೊಂದಿ ಅವರ ವಿಷಯವಾಗಿ ''ಯತಿರಾಜವಿಂಶತಿ'' ಎಂಬ ಸ್ತೋತ್ರವನ್ನು ಅನುಗ್ರಹಿಸಿದರು. ಇದರಿಂದ ಸಂತುಷ್ಟರಾದ ತಿರುವಾಯ್ಮೊಳಿಪಿಳ್ಳೈಯವರು ತಮ್ಮ ತಿರುವಾರಾಧನ ಮೂರ್ತಿಯಾದ ರಾಮಾನುಜರನ್ನೇ ಅವರಿಗೆ ಕೃಪೆಮಾಡಿಕೊಟ್ಟರು. ಮುಂದೆ ಅಳಹಿಯ ಮಣವಾಳರಿಗೆ ಒಬ್ಬ ಪುತ್ರನು ಜನಿಸಲು ಅವನಿಗೆ ರಾಮಾನುಜನೆಂಬ ನಾಮಕರಣವನ್ನು ಮಾಡಿದರು.

ಕಾಲಕ್ರಮದಲ್ಲಿ ತಿರುವಾಯ್ಮೊಳಿ ಪಿಳ್ಳೈಯವರಿಗೆ ದೇಹಾಲಸ್ಯವುಂಟಾಗಲು ಅವರು ಅಳಹಿಯ ಮಣವಾಳರನ್ನು ಕರೆದು ಎಲ್ಲ ಆಳ್ವಾರ್‌ಗಳ ದಿವ್ಯಪ್ರಬಂಧಗಳನ್ನೂ, ಶ್ರೀಭಾಷ್ಯವನ್ನೂ ಚೆನ್ನಾಗಿ ಅಧ್ಯಯನ ಮಾಡಿ ಅವನ್ನು ಮುಂದೆ ಎಲ್ಲರಿಗೂ ತಿಳಿಯುವಂತೆ ಮಾಡಬೇಕೆಂದು ನಿಯಮಿಸಲು ಅಳಹಿಯ ಮಣವಾಳರು ಅವರ ಇಷ್ಟಾರ್ಥವನ್ನು ನಡೆಸುವುದಾಗಿ ಪ್ರತಿಜ್ಞೆಮಾಡಿದರು. ಅನಂತರ ತಿರುವಾಯ್ಮೊಳಿಪಿಳ್ಳೈ ಯವರು ತಮ್ಮ ಶಿಷ್ಯರನ್ನೆಲ್ಲಾ ಕರೆದು ಅಳಹಿಯ ಮಣವಾಳರನ್ನು ಮುಂದೆ ಆದರಿಸಬೇಕೆಂದು ನಿಯಮಿಸಿದರು. ಅನಂತರ ಅವರು ಪಿಳ್ಳೈ ಲೋಕಾಚಾರ್ಯರನ್ನು ಧ್ಯಾನಮಾಡುತ್ತಾ ಪರಮಪದಿಸಲು ಅವರ ಶಿಷ್ಯರುಗಳು ಅವರ ಕೈಂಕರ್ಯಗಳನ್ನು ಸಾಂಗವಾಗಿ ನೆರವೇರಿಸಿದರು.

ಕಾಲಕ್ರಮದಲ್ಲಿ ಮಣವಾಳರು ''ಅಳಹಿಯ ಪೆರುಮಾಳ್ ನಾಯನಾರ್'' ಎಂದು ಕರೆಯಲ್ಪಟ್ಟರು. ಅನಂತರ ಇವರ ವೈಭವವು ಎಲ್ಲಾ ಕಡೆಗೂ ಹರಡಿತು. ಅಳಹಿಯ ವರದರೆಂಬುವರೂ, ಸೇನೈ ಮೊದಲಿಯಾರಣ್ಣರೆಂಬುವರೂ ಇವರ ಶ್ರೀಪಾದಗಳನ್ನು ಆಶ್ರಯಿಸಿದರು. ಅವರಲ್ಲಿ ಮಹಾವಿರಕ್ತರಾದ ವರದರು ತುರ್ಯಾಶ್ರಮವನ್ನು ಸ್ವೀಕಾರಮಾಡಿ ''ರಾಮನಂಜಜೀಯರ್'' ಎಂಬ ಹೆಸರನ್ನು ಪಡೆದು ನಾಯನಾರ್‌ರವರಿಗೆ ನಿತ್ಯಸೇವೆಯನ್ನು ಮಾಡುತ್ತಿದ್ದರು. ತಿರುವಾಯ್‌ಮೊಳಿ ಪಿಳ್ಳೈಯವರ ನೇಮನದಂತೆ ಆಳ್ವಾರ್ ನೇಮನವನ್ನು ಪಡೆದು ಮಣವಾಳ ಮಾಮುನಿಯವರು ಶ್ರೀರಂಗಕ್ಕೆ ಪ್ರಯಾಣವನ್ನು ಮಾಡಿದರು. ದಾರಿಯಲ್ಲಿ ಶ್ರೀವಿಲ್ಲಿಪುತ್ತೂರಿನಲ್ಲಿ ಆಂಡಾಳಳನ್ನೂ ರಂಗಮನ್ನಾರರನ್ನೂ ಸೇವಿಸಿ ಶ್ರೀರಂಗವನ್ನು ಸೇರಿದರು. ಅಲ್ಲಿ ಅನೇಕ ಶ್ರೀವೈಷ್ಣವರನ್ನೂ ಭಟ್ಟರನ್ನೂ ಭೇಟಿಮಾಡಿ ಅಲ್ಲಿ ನಮ್ಮಾಳ್ವಾರ್ ಅವರ ವೈಭವವನ್ನು ಪ್ರತಿಪಾದಿಸುವ ತಿರುವಾಯ್ಮೊಳಿಯ ಪಾಶುರವೊಂದನ್ನು ಮುಪ್ಪತ್ತಾರಾಯಿರಪ್ಪಡಿಯ ಕ್ರಮದಲ್ಲಿ ಉಪನ್ಯಾಸ ಮಾಡಲು, ಇವರ ಉಪನ್ಯಾಸದ ವೈಖರಿಯನ್ನು ಕಂಡು ಭಟ್ಟರು ಇವರಿಗೆ 'ಮುಪ್ಪತಾರಾಯಿರಪ್ಪೆರುಕ್ಕರ್' ಎಂದು ನಾಮಕರಣ ಮಾಡಿದರು. ಅನಂತರ ಎಂಬೆರುಮಾನಾರ್ ಸನ್ನಿಧಿಯಲ್ಲಿ ''ಯೋನಿತ್ಯ

ಪದಾಂಬುಜಯುಗ್ಮರುಕ್ಮ'' ಎಂಬ ತನಿಯನನ್ನು ಅನುಸಂಧಾನ ಮಾಡಿ, ಅಲ್ಲಿಯ ಸುತ್ತಮುತ್ತಲಿನ ಎಲ್ಲ ಅರ್ಚಾಮೂರ್ತಿಗಳನ್ನೂ ಸೇವಿಸಿ ಅವರಿಗೆಲ್ಲಾ ಮಂಗಳಾಶಾಸನವನ್ನು ಮಾಡಿ, ಅಳಹಿಯ ಮಣವಾಳನನ್ನು ಸೇವಿಸಿ ಪಾದಾದಿಕೇಶಪರ್ಯಂತ ಅನುಭವಿಸುತ್ತಾ ನಿಂತರು. ಆಗ ದೇವರು ದೇಶಾಂತರನಾದ ಪುತ್ರನನ್ನು ಕಂಡ ತಂದೆ ತಾಯಿಗಳಂತೆ ಇವರನ್ನು ಕಟಾಕ್ಷಿಸಿ ಉದ್ಯೈಯವರನ್ನು ಅನುಗ್ರಹಿಸಿದಂತೆ ಇವರನ್ನೂ ಬಹಳವಾಗಿ ಗೌರವಿಸಿ ಕೃಪೆ ಮಾಡಿದರು. ಅನಂತರ ಮಣವಾಳರು ದೇವರ ಸನ್ನಿಧಿಯಲ್ಲಿ ಅಂಜಲಿ ಹಸ್ತರಾಗಿ ನಿಂತಿರಲು ಅವರಿಗೆ ಭಗವಂತನು ತೀರ್ಥಪ್ರಸಾದ ಶಠಗೋಪಗಳೆಲ್ಲವನ್ನೂ ಅನುಗ್ರಹಿಸಿ ಅರ್ಚಕಮುಖೇನ ಅಲ್ಲಿಯೇ ಇರುವಂತೆ ಅಪ್ಪಣೆ ಮಾಡಲು, ಅವರು ದರ್ಶನ ರಹಸ್ಯಗಳನ್ನು ನಿರ್ವಹಿಸಿಕೊಂಡು ಭಗವಂತನ ಅಪ್ಪಣೆಯನ್ನು ಮಹಾಪ್ರಸಾದವೆಂದು ಅಂಗೀಕರಿಸಿ ಶ್ರೀರಂಗ ದಲ್ಲಿ ನಿಯತವಾಗಿ ವಾಸ ಮಾಡತೊಡಗಿದರು.

ಅನಂತರ ಅಲ್ಲಿ ದರ್ಶನ ಗ್ರಂಥಗಳನ್ನು ಜೀರ್ಣೋದ್ಧಾರಮಾಡಿ, ದೇವಸ್ಥಾನದ ಸೇವಾದಿಗಳ ಸುವ್ಯವಸ್ಥೆ ಮಾಡಿ ದೇವರ ನೇಮನವನ್ನು ಪಡೆದು ತಿರುಮಲೈ ತಿರುಪತಿಯನ್ನು ಸೇವಿಸಬೇಕೆಂದು ಪ್ರಯಾಣ ಹೊರಟರು. ಸಮೀಪದಲ್ಲಿದ್ದ ತಿರುವೆಳ್ಳರೈ ಎಂಬ ದಿವ್ಯದೇಶದಲ್ಲಿದ್ದ ತಂಗಯಚೆಲ್ವಿಯಾರನ್ನೂ, ಪುಂಡರೀಕಾಕ್ಷನನ್ನೂ ಸೇವಿಸಿ, ಮುಂದೆ ತಿರುಕ್ಕೋವಿಲೂರಿಗೆ ಹೋಗಿ ಅಲ್ಲಿ ಉಲಹಳಂದ ಪೆರುಮಾಳನ್ನೂ, ಕಣ್ಣಪಿರಾನನ್ನೂ ಸೇವಿಸಿ ಅವರಿಗೆಲ್ಲಾ ಮಂಗಳಾಶಾಸನವನ್ನು ಮಾಡಿ ತಿರುಪತಿಯನ್ನು ಸೇರಿದರು. ಅಲ್ಲಿ ತಿರುಮಲೈ ಅಪ್ಪನನ್ನು ಸೇವಿಸಿ, ದೇವಸ್ಥಾನದ ಸಕಲ ಮರ್ಯಾದೆಗಳನ್ನೂ ಪಡೆದು ಕಂಚಿಗೆ ದಯಮಾಡಿಸಿದರು. ಅಲ್ಲಿ ಎಂಬೆರುಮಾನಾರನ್ನು ಸೇವಿಸಿ, ಹಸ್ತಿಗಿರಿಯಲ್ಲಿ ವರದರಾಜರನ್ನು ಸೇವಿಸಿ ಅಲ್ಲಿನ ಮರ್ಯಾದೆಗಳನ್ನೆಲ್ಲಾ ಪಡೆದರು. ಅನಂತರ ಶ್ರೀಪೆರಂಬುದೂರಿಗೆ ಹೋಗಿ ರಾಮಾನುಜಾ ಚಾರ್ಯರಿಗೆ ವಂದಿಸಿ ಶ್ರೀ ಭಾಷ್ಯವನ್ನು ಅಧಿಕರಿಸುವುದಕ್ಕೆ ಅಪ್ಪಣೆ ಪಡೆದು ಕಂಚಿಗೆ ಹಿಂತಿರುಗಿದರು. ಕಂಚಿಯಲ್ಲಿ ಕಿಡಾಂಬಿ ನಾಯನಾರ್ರವರ ಬಳಿ ಶ್ರೀ ಭಾಷ್ಯವನ್ನು ಅಧಿಕರಿಸಿ ತಮಗೆ ಬೇಕಾದ ಗ್ರಂಥಗಳನ್ನೆಲ್ಲಾ ತೆಗೆದುಕೊಂಡು ಶ್ರೀರಂಗಕ್ಕೆ ಹಿಂದಿರುಗಿ ಅಲ್ಲಿನ ಅರ್ಚಾಮೂರ್ತಿ ಸೇವಿಸಿ ಅವರ ನೇಮನದಂತೆ ಅಲ್ಲಿಯೇ ವಾಸಮಾಡುತ್ತಿದ್ದರು.

ಅವರಿಗೆ ಅವರ ಸಮೀಪ ಬಂಧುವಿನ ಅಶೌಚ ಸಮಾಚಾರವು ತಿಳಿದು ತಮ್ಮ ಭಗವತ್ಕೈಂಕರ್ಯಕ್ಕೆ ಭಂಗವುಂಟಾಗಲು ಅವರು ಈ ಪರಿಕರಗಳನ್ನೆಲ್ಲಾ ತ್ಯಜಿಸಬೇಕೆಂದು ನಿರ್ಣಯಿಸಿ ಶ್ರೀಶಠಗೋಪಜೀಯರ ಹತ್ತಿರ ಹೋಗಿ ತಮಗೆ ತ್ರಿದಂಡ ಕಾಷಾಯಗಳನ್ನು ದಯಪಾಲಿಸ ಬೇಕೆಂದು ಪ್ರಾರ್ಥಿಸಿದರು. ಅವರು ಇವರಿಗೆ ತ್ರಿದಂಡ ಕಾಷಾಯಗಳನ್ನು ಅನುಗ್ರಹಿಸಿ ಶ್ರೀಶಠಕೋಪಜೀಯರೆಂದು ನಾಮಕರಣ ಮಾಡಿದರು. ಅನಂತರ ಭಗವಂತನ ನಿಯಮನದ ಪ್ರಕಾರ ''ಅಳಹಿಯ ಮಣವಾಳ ಜೀಯ''ರಾಗಿ ಆ ಮಠವನ್ನು ಸೇರಿದರು. ಇವರ ಜ್ಞಾನ, ಭಕ್ತಿ, ವೈರಾಗ್ಯವನ್ನು ಗಮನಿಸಿ ಅಲ್ಲಿನ ಶ್ರೀವೈಷ್ಣವರೆಲ್ಲ ಇವರ ಶಿಷ್ಯರಾದರು. ಅಲ್ಲಿನ ಪಟ್ಟರ್‌ಪಿರಾನ್ ಜೀಯರು ಇವರನ್ನು ಆಶ್ರಯಿಸಿ ಇವರ ಸೇವೆಯಲ್ಲಿ ನಿರತರಾಗಿದ್ದರು.

ಮುಂದೆ ಇವರಿಗೆ ಮಣವಾಳ ಮಾಮುನಿ ಎಂಬ ಹೆಸರುಂಟಾಯಿತು. ಅಳಹಿಯ ಮಣವಾಳ ಜೀಯರೆಂದೂ ಕರೆಯಲ್ಪಟ್ಟರು. ಇವರು ನಿತ್ಯವೂ ದಿವ್ಯಪ್ರಬಂಧಗಳನ್ನು ಅನುಸಂಧಾನ ಮಾಡುತ್ತಾ ಪ್ರಪನ್ನಗಾಯತ್ರಿ ಎಂದು ಪ್ರಸಿದ್ಧಿಯಾದ ''ರಾಮಾನುಜ ನೂತ್ತಂದಾದಿ''ಯನ್ನು ಸದಾ ಅನುಸಂಧಾನ ಮಾಡುತ್ತಿದ್ದರು. ಇದರಿಂದ ಸುಪ್ರೀತನಾದ ರಂಗನಾಥನು ಅವರ ನಿತ್ಯ ತಿರುವಾರಾಧನಕ್ಕೆ ಶ್ರೀರಂಗರಾಜರ ಅರ್ಚಾಮೂರ್ತಿಯನ್ನು ಅನುಗ್ರಹಿಸಲು ಅವರು ಆ ಮೂರ್ತಿಯನ್ನು ಮಠದಲ್ಲಿ ಪ್ರತಿಷ್ಠೆ ಮಾಡಿ ತಾವೇ ತಿರುವಾರಾಧನವನ್ನು ಸಮರ್ಪಿಸುತ್ತಿದ್ದರು.

ಆ ಕಾಲದಲ್ಲಿ ಶ್ರೀರಂಗದ ಮುದಲಿ ಯಾಂಡಾನ್ ವಂಶಸ್ಥರಾಗಿದ್ದ ಕಂದಾಡೈ ಅಣ್ಣನ್ ಎಂಬುವರು ಬಹಳ ಪ್ರಬಲರಾಗಿ ಖ್ಯಾತಿಯನ್ನು ಪಡೆದಿದ್ದರು. ಇವರ ಮನೆಗೆ ಸೇರಿದ ಹೆಣ್ಣುಮಗಳೊಬ್ಬಳು ಮಣವಾಳ ಮಾಮುನಿ ಗಳಲ್ಲಿ ಭಕ್ತಿ ಹೊಂದಿ ಅವರ ಶಿಷ್ಯಳಾಗಿ ಅವರಿಂದ ಸಮಾಶ್ರಯಣವನ್ನು ಪಡೆದಳು. ಇದರಿಂದ ಮೊದಲು ಕೋಪಾವಿಷ್ಟರಾದ ಕಂದಾಡೈ ಅಣ್ಣನವರು ನಂತರ ಭಗವಂತನ ಅನುಗ್ರಹ ದಿಂದ ತಾವೆಲ್ಲರೂ ಒಂದೇ ಗುಂಪಿನವರೆಂದು ಅರಿತುಕೊಂಡು ತಮ್ಮ ಶಿಷ್ಯರೊಂದಿಗೆ ಮಣವಾಳ ಮಾಮುನಿಗಳ ಶ್ರೀಪಾದವನ್ನು ಆಶ್ರಯಿಸಿ ಅವರಿಂದ ಎಲ್ಲರೂ ಸಮಾಶ್ರಯಣವನ್ನು ಪಡೆದರು. ಇದರಿಂದ ಮಣವಾಳ ಮಾಮುನಿಗಳ ವೈಭವವು ಎಲ್ಲೆಲ್ಲೂ ಪ್ರಖ್ಯಾತವಾಯಿತು. ಕಂಚಿಯಲ್ಲಿ ''ಪ್ರತಿವಾದಿ ಭಯಂಕರ ಅಣ್ಣನ್'' ಎಂಬುವರು ಬಹಳ ಪ್ರಖ್ಯಾತರಾಗಿದ್ದರು. ಅವರಿಗೆ ಮೊದಲು ಮಣವಾಳಮಾಮುನಿಗಳಲ್ಲಿ ಅಷ್ಟು ಅಭಿಮಾನವಿರಲಿಲ್ಲ. ಅನಂತರ ಅವರ ವೈಭವವನ್ನು ಭಗವಂತನ ಕೃಪೆಯಿಂದ ಅರಿತು ಅವರನ್ನು ಸೇವಿಸಲು ಬಂದಾಗ ಅವರು ಮಾಡುತ್ತಿದ್ದ ತಿರುವಾಯ್ಮೊಳಿ ವ್ಯಾಖ್ಯಾನಗಳಲ್ಲಿ ಅವರ ವಾಗ್ವೈಖರಿಯನ್ನು ಕೇಳಿ ಬಹಳ ಆಶ್ಚರ್ಯ ಹೊಂದಿ ಅವರು ಸಾಮಾನ್ಯ ವ್ಯಕ್ತಿಯಲ್ಲವೆಂಬುದನ್ನು ಅರಿತರು. ಅನಂತರ ಮಣವಾಳ ಮಾಮುನಿಗಳಿಗೆ ಸಾಷ್ಟಾಂಗ ಪ್ರಣಾಮವನ್ನು ಮಾಡಿ ತಮ್ಮೆಲ್ಲರನ್ನು ಅಂಗೀಕರಿಸಬೇಕೆಂದು ಪ್ರಾರ್ಥಿಸಿದರು. ಆಗ ಮಣವಾಳಮಾಮುನಿಗಳು ಅವರೆಲ್ಲರಿಗೂ ಪಂಚಸಂಸ್ಕಾರಗಳನ್ನು ಮಾಡಿ, ಸಮಾ ಶ್ರಯಣವನ್ನೂ ಮಾಡಿ ರಹಸ್ಯಾರ್ಥಗಳೆಲ್ಲವನ್ನೂ ಉಪದೇಶಿಸಿದರು.

ಹೀಗಿರಲು ಜೀಯರ ಪೂರ್ವಾಶ್ರಮದ ಕುಮಾರರಾದ ರಾಮಾನುಜರಿಗೆ ಇಬ್ಬರು ಪುತ್ರರು ಜನಿಸಿದರು. ಅವರಿಬ್ಬರಿಗೂ ''ಅಳಹಿಯಮಣವಾಳ ಪೆರುಮಾಳ್ ನಾಯನಾರ್'' ಎಂದೂ ''ವಿಷ್ಣುಚಿತ್ತರ್'' ಎಂದೂ ನಾಮಕರಣವಾಗಿತ್ತು. ಅವರು ಪ್ರಾಪ್ತಕಾಲದಲ್ಲಿ ಉಪನೀತರಾಗಿ ಜೀಯರ್ರವರ ಶ್ರೀಪಾದವನ್ನು ಆಶ್ರಯಿಸಿ ಅವರ ಕಟಾಕ್ಷಕ್ಕೆ ಪಾತ್ರರಾಗಿ ಅವರ ಸೇವೆಯನ್ನು ಮಾಡುತ್ತಿದ್ದರು. ಮಣವಾಳ ಮಾಮುನಿಗಳು ಅನೇಕ ದಿವ್ಯ ದೇಶಗಳಿಗೆ ಹೋಗಿ ಅಲ್ಲಿನ ಅರ್ಚಾಮೂರ್ತಿಗಳನ್ನು ಸೇವಿಸಿ ಆಳ್ವಾರ್

ತಿರುನಗರಿಗೆ ಬಂದರು. ಅಲ್ಲಿ ನಮ್ಮಾಳ್ವಾರ್ರವರ ದೇವಸ್ಥಾನಕ್ಕೆ ಬಂದು ಅಲ್ಲಿ ಅವರ ಅನುಸಂಧಾನ ಮಾಡುತ್ತಾ ಅವರಿಗೆ ಸಾಷ್ಟಾಂಗಪ್ರಣಾಮವನ್ನು ಮಾಡಿ, ಅವರನ್ನು ಸೇವಿಸಿ ''ಕಣ್ಣಿನುಣ್ ಶಿರುತ್ತಾಂಬು'' ಎಂಬ ದಿವ್ಯಪ್ರಬಂಧವನ್ನು ಹೇಳುತ್ತಾ ಅವರ ಹತ್ತಿರ ಅವರೇ ತಮಗೆ ಆಪ್ತಬಂಧುವೆಂಬ ಭಾವದಿಂದ ಸವಿನಯರಾಗಿ ನಿಂತುಕೊಂಡಿದ್ದರು. ಜೀಯರನ್ನು ಕಂಡ ನಮ್ಮಾಳ್ವಾರ್ರವರು ಅವರಿಗೆ ಅತ್ಯಂತ ಅತಿಶಯದಿಂದ ತೀರ್ಥ, ತಿರುಮಾಲೆ, ಪ್ರಸಾದಗಳನ್ನೂ, ಶ್ರೀರಾಮಾನುಜರನ್ನೂ ಅನುಗ್ರಹಿಸಲು ಅವರು ಅಲ್ಲಿಯ ಆದಿನಾಥ ಪೆರುಮಾಳರನ್ನೂ, ಮಂಗಳಾಶಾಸನ ಮಾಡಿ ಕೃತಾರ್ಥರಾದರು. ಅಲ್ಲಿಯೇ ಕೆಲವು ಕಾಲ ನಿಂತು ಶಿಷ್ಯ ಸಮುದಾಯಕ್ಕೆ ದಿವ್ಯ ಪ್ರಬಂಧಗಳನ್ನೂ, ದರ್ಶನ ರಹಸ್ಯಗಳನ್ನೂ ಉಪದೇಶಿಸುತ್ತಿದ್ದರು.

ಒಂದು ಸಲ ಅವರಿಗೆ ಆಚಾರ್ಯ ಹೃದಯ ಎಂಬ ಗ್ರಂಥದಲ್ಲಿ ಒಂದು ಸೂತ್ರವು ಸರಿಯಾಗಿ ಅರ್ಥವಾಗದಿರಲು, ಆ ಗ್ರಂಥದಲ್ಲಿ ಪರಿಣತರಾಗಿದ್ದ ಆಯಿಸ್ವಾಮಿಗಳು ಮೇಲುಕೋಟೆಯಲ್ಲಿರಲು ಅವರನ್ನು ನೋಡಲು ಜೀಯರು ಅಲ್ಲಿಗೆ ಹೊರಟರು. ಆಗ ಆಯಿಸ್ವಾಮಿಗಳು ಜೀಯರ್‌ರವರ ವೈಭವವನ್ನು ಅರಿತವರಾಗಿ ಇವರನ್ನು ನೋಡಲು ಅವರು ಅಲ್ಲಿಂದ ಹೊರಟು ಬರಲು, ಇಬ್ಬರೂ ಆಳ್ವಾರ್ ತಿರುನಗರಿಯಲ್ಲಿ ಭೇಟಿಯಾಗಿ ಕೆಲವು ಕಾಲ ಇದ್ದರು. ಆಗ ಅವರ ಹತ್ತಿರ ಜೀಯರು ಆಚಾರ್ಯ ಹೃದಯವನ್ನು ಪೂರ್ತಿಯಾಗಿ ಅಧಿಕರಿಸಿ ತಮ್ಮ ಸಂದೇಹಗಳನ್ನು ಪರಿಹರಿಸಿಕೊಂಡು ಅವರ ಉಪಕಾರದಿಂದ ಪ್ರೀತರಾಗಿ ಅವರ ವಿಷಯವಾಗಿ ಬಂದು ತನಿಯನನ್ನು ಬರೆದು ಕೆಲವು ಕಾಲ ಅವರೊಂದಿಗೆ ಅಲ್ಲಿಯೇ ಇದ್ದರು. ಹೀಗೆ ಮಣವಾಳ ಮಾಮುನಿಗಳು ವೈಭವದಿಂದ ಇರಲು ಅದನ್ನು ಸಹಿಸದೆ ಕೆಲವು ಅಸೂಯಾಪರರು ಅವರು ಮಲಗಿದ್ದಾಗ ಅವರ ಪರ್ಣಕುಟೀರಕ್ಕೆ ಬೆಂಕಿಯನ್ನು ಹಚ್ಚಿಸಿದರು. ಅದನ್ನು ತಿಳಿದ ಮಾಮುನಿಗಳು ತಮ್ಮ ಪ್ರಭಾವದಿಂದ ಬೆಂಕಿಯನ್ನು ಆರಿಸಿದರು. ಇವರ ಅದ್ಭುತವಾದ ಶಕ್ತಿಯನ್ನು ಕಂಡು ಎಲ್ಲರೂ ಆಶ್ಚರ್ಯಪಟ್ಟರು. ಬೆಂಕಿ ಹಚ್ಚಿದ ತಪ್ಪಿತಸ್ಥರಲ್ಲಿ ಕರುಣೆತೋರಿಸಿ ರಾಜನ ಶಿಕ್ಷೆಯಿಂದ ತಪ್ಪಿಸಲು, ಅವರುಗಳು ತಮ್ಮ ಅಕೃತ್ಯಕ್ಕೆ ನಾಚಿಕೆಪಟ್ಟು, ಪಶ್ಚಾತ್ತಾಪವನ್ನು ಹೊಂದಿ ಮಾಮುನಿಗಳನ್ನು ಆಶ್ರಯಿಸಿದರು. ಒಬ್ಬ ಧನಾಢ್ಯನು ಇವರನ್ನು ಆಶ್ರಯಿಸಿ ಇವರಿಂದ ''ಶಠಗೋಪ ದಾಸ''ನೆಂಬ ಹೆಸರನ್ನು ಪಡೆದು ಅಲ್ಲಿನ ದೇವಸ್ಥಾನವನ್ನು ಜೀರ್ಣೋದ್ಧಾರ ಮಾಡಿ, ಅಳಹಿಯ ಮಣವಾಳ ಮಂಟಪವನ್ನು ಕಟ್ಟಿಸಿದನು. ಅನಂತರ ಜೀಯರು ಅಲ್ಲಿಂದ ಹೊರಟು ತಿರುಕ್ಕುರುಂಗುಡಿಯನ್ನು ಸೇರಿ ಅಲ್ಲಿ ''ತಿರುವೇಂಗಡ ಮುಡೈಯಾನ್'' ಎಂಬ ಬ್ರಾಹ್ಮಣನನ್ನು ಅಭಿಮಾನಿಸಿ ಅವನಿಗೆ ''ತಿರುವೇಂಗಡ ದಾಸ''ನೆಂದು ನಾಮಕರಣ ಮಾಡಿದರು. ಅವನು ಅಲ್ಲಿನ ಪಂಚನಂಬಿಗಳಿಗೆ ಕಲ್ಲು ಕಟ್ಟಡಗಳನ್ನು ಕಟ್ಟಿಸಿ ಮಾವಿನ ತೋಪುಗಳನ್ನು ಏರ್ಪಡಿಸಿದನು. ಅನಂತರ ಜೀಯರು ಆಳ್ವಾರ್ ತಿರುನಗರಿಗೆ ಹಿಂತಿರುಗಿ ನಮ್ಮಾಳ್ವಾರ್ರವರ ನೇಮನವನ್ನು ಪಡೆದು ಶ್ರೀರಂಗಕ್ಕೆ ಒಂದು ಎಂದಿನಂತೆ ತಮ್ಮ ಕರ್ತವ್ಯನಿಷ್ಠರಾದರು.

ಒಮ್ಮೆ ಕಂದಾಡೈ ಅಣ್ಣನವರ ಸಮೀಪ ಬಂಧುವಾದ ''ಎರುಮ್ಬಿ ಅಪ್ಪಾ'' ಎಂಬುವರು ಶ್ರೀರಂಗಕ್ಕೆ ಬಂದರು. ಅವರು ಮಾಮುನಿಗಳ ಆತಿಥ್ಯವನ್ನು ಸ್ವೀಕರಿಸದೆ ಇರಲು ಭಗವಂತನು ಅವರ ತಿರುವಾರಾಧನವನ್ನು ಅಂಗೀಕರಿಸದೆ ಮಾಮುನಿಗಳಲ್ಲಿ ಕ್ಷಮೆಯನ್ನು ಬೇಡಲು ಅರ್ಚಕಮುಖೇನ ಅವರಿಗೆ ತಿಳಿಸಲು ಅವರು ಹಾಗೆಯೇ ಮಾಡಿದರು. ಅನಂತರ ಮಾಮುನಿಗಳು ಅವರಿಗೆ ಪಂಚಸಂಸ್ಕಾರಮಾಡಿ ಸಮಾಶ್ರಯಣವನ್ನು ಮಾಡಿದರು. ಎರುಮ್ಬಿ ಅಪ್ಪಾ ಎಂಬುವರು ಮಾಮುನಿಗಳ ವೈಭವವನ್ನು ಕಂಡು ಸಂತೋಷಿಸಿ ಅವರೊಂದಿಗೆ ಕೆಲವು ಕಾಲ ಇದ್ದು ಅವರಿಂದ ಅನುಗ್ರಹೀತರಾಗಿ ಅವರ ತಿರುವಡಿ ನೆಲೆಗಳನ್ನು ಪಡೆದು ತಮ್ಮ ಗ್ರಾಮಕ್ಕೆ ಹಿಂತಿರುಗಿದರು.

ಎಲ್ಲರಿಗೂ ಮಣವಾಳ ಮಾಮುನಿಗಳ ವೈಭವವನ್ನು ತಿಳಿಸಬೇಕೆಂದು ದೇವರು ಅವರ ಕೈಯಲ್ಲಿ ಒಂದು ವರ್ಷಕಾಲ ಭಗವ ದ್ವಿಷಯವನ್ನು ಕಾಲಕ್ಷೇಪ ಮಾಡಿಸಿದರು. ಅನಂತರ ಆಚಾರ್ಯ ಸಂಭಾವನೆಗಾಗಿ ಅನೇಕ ಫಲತಾಂಬೂಲದ ತಟ್ಟೆಗಳು ಇಡಲ್ಪಟ್ಟವು. ಆ ಸಮಯದಲ್ಲಿ ಅಳಹಿಯ ಮಣವಾಳ ಭಟ್ಟರ ಮಕ್ಕಳು ಐದು ವರ್ಷದ ರಂಗನಾಯಕನೆಂಬ ಬಾಲಕನು ದೇವರು ಬಿಜಯಮಾಡಿರುವಲ್ಲಿಗೆ ಬಂದು ಆಚಾರ್ಯ ಸಂಭಾವನೆಯ ತಟ್ಟೆಯನ್ನು ಕೈಯಲ್ಲಿ ತೆಗೆದುಕೊಂಡು-

**ಶ್ರೀ ಶೈಲೇಶ ದಯಾಪಾತ್ರಂ**
**ಧೀ ಭಕ್ತ್ಯಾದಿ ಗುಣಾರ್ಣವಂ ।**
**ಯತೀಂದ್ರ ಪ್ರವಣಂ ವನ್ದೇ**
**ರಮ್ಯಜಾಮಾತರಂ ಮುನಿಂ ॥**

ಎಂಬ ಶ್ಲೋಕವನ್ನು ಸ್ಫುಟವಾಗಿ ಹೇಳಿ ತಟ್ಟೆಯನ್ನು ಕೆಳಗಿಟ್ಟು ಯಾರು ಏನು ಕೇಳಿದರೂ ತನಗೇನೂ ಗೊತ್ತಿಲ್ಲವೆಂದು ಹೇಳಿ ಓಡಿ ಹೊರಟುಹೋದನು. ಆಗ ಅಲ್ಲಿದ್ದ ಜ್ಞಾನವೃದ್ಧರೂ, ವಯೋವೃದ್ಧರೂ ಈ ಅದ್ವಿತೀಯವಾದ ತನಿಯನನ್ನು ಕೇಳಿ ಆನಂದಪರವಶರಾಗಿ ಅಳಹಿಯ ಮಣವಾಳನೇ ಬಾಲಕನವೇಷದಲ್ಲಿ ಬಂದು ಶ್ಲೋಕವನ್ನು ಹೊರಗೆಡಹಿ ಆಚಾರ್ಯ ವೈಭವವನ್ನು ಪ್ರಕಾಶಪಡಿಸಿರುತ್ತಾನೆಂದು ನಿಷ್ಕರ್ಷಿಸಿದರು. ಅನಂತರ ಅವರೆಲ್ಲರೂ ಮಣವಾಳ ಮಾಮುನಿಗಳಿಗೆ ಬಹಳ ಮರ್ಯಾದೆ ಮಾಡಿ ವೈಭವದಿಂದ ಅವರನ್ನು ಮಠಕ್ಕೆ ಹಿಂತಿರುಗಿಸಿದರು. ಈ ತನಿಯನನ್ನು ಸಕಲ ದಿವ್ಯ ದೇಶಗಳಿಗೂ ಕಳುಹಿಸಲ್ಪಟ್ಟು ಇದು ಕಾರ್ಯಾರಂಭದಲ್ಲಿಯೂ, ಕಾಲಕ್ಷೇಪ ಸಮಾಪ್ತಿಯಲ್ಲಿಯೂ ಅನುಸಂಧಿ ಸಲ್ಪಡ ಬೇಕೆಂದು ದೇವರ ಕಟ್ಟಳೆಯಾಯಿತು.

ಅನಂತರ ಮನವಾಳ ಮಾಮುನಿಗಳಿಗೆ ಮತ್ತೆ ಕಂಚಿ, ತಿರುಪತಿ ಮುಂತಾದ ದಿವ್ಯದೇಶಗಳಿಗೆ ಯಾತ್ರೆ ಮಾಡಬೇಕೆಂಬ ಅಭಿರುಚಿ ಯುಂಟಾಗಲು ಅವರು ತಮ್ಮ ವೈಷ್ಣವ ಸಮೂಹದೊಡನೆ ಭಗವಂತನ ನೇಮನವನ್ನು ಪಡೆದು ಪ್ರಮಾಣ ಹೊರಟರು. ಮೊದಲು ಕಂಚಿಗೆ ಹೋಗಿ ವರದರಾಜರನ್ನು ಸೇವಿಸಿ ಅನಂತರ ತಿರುಪತಿಯಲ್ಲಿ ಶ್ರೀನಿವಾಸನನ್ನೂ, ಅಲಮೇಲು ಮಂಗೈಯನ್ನೂ ದರ್ಶಿಸಿ

ಅವರುಗಳಿಗೆ ಮಂಗಳಾಶಾಸನವನ್ನು ಮಾಡಿ ಅಲ್ಲಿ ಕೆಲವು ದಿವಸ ಇದ್ದರು. ಅನಂತರ ಬೆಟ್ಟವನ್ನಿಳಿದು ಗೋವಿಂದರಾಜರನ್ನು ಸೇವಿಸಿ ಮದರಾಸಿನ ತಿರುವಲ್ಲಿಕ್ಕೇಣಿಯಲ್ಲಿ ಪಾರ್ಥಸಾರಥಿಯನ್ನು ಸೇವಿಸಿ ಅಲ್ಲಿಂದ ಕಂಚಿಯನ್ನು ಸೇರಿ ಮಧುರಾಂತಕಕ್ಕೆ ಬಂದು ಅಲ್ಲಿಂದ ತಿರುವಹೀಂದ್ರಪುರಕ್ಕೆ ಬಂದು ಅಲ್ಲಿ ಕೇಶವನಾಯಕರನ್ನು ಸೇವಿಸಿದರು. ಅನಂತರ ತಿರುವಾಲಿ, ತಿರುನಗರಿ, ತಿರುಕಣ್ಣಪುರ, ತಿರುಕ್ಕುಡಂದೈ ಮುಂತಾದ ಕಡೆ ಅಲ್ಲಿನ ಅರ್ಚಾಮೂರ್ತಿಗಳನ್ನು ಸೇವಿಸಿ ಮಂಗಳಾ ಶಾಸನವನ್ನುಮಾಡಿ ಶ್ರೀರಂಗಕ್ಕೆ ಹಿಂತಿರುಗಿದರು. ಅಲ್ಲಿನ ದೇವರನ್ನು ನಿತ್ಯದಂತೆ ಸೇವಿಸಿ ತಮ್ಮ ಮಠವನ್ನು ಸೇರಿ ಎಂದಿನಂತೆ ತಮ್ಮ ಕರ್ತವ್ಯ ನಿರತರಾದರು.

ಅನಂತರ ಎರುಂಬಿ ಅಪ್ಪಾರವರು ಜೀಯರ್ರವರ ವಿಶ್ಲೇಷವನ್ನು ಸಹಿಸಲಾರದೆ ಕಷ್ಟಪಟ್ಟರು. ಅನಂತರ ಎಲ್ಲರಿಗೂ ಅವರ ದಿನಾಚರಿಕ್ರಮವು ಸುಲಭವಾಗಿ ತಿಳಿಯುವಂತೆ ''ಪೂರ್ವದಿನಚರಿ'', ''ಉತ್ತರದಿನಚರಿ'' ಎಂಬ ಗ್ರಂಥಗಳನ್ನು ಬರೆದು ಜೀಯರಿಗೆ ಕಳುಹಿಸಿಕೊಟ್ಟು ಅವರ ನಿಯಮನದಂತೆ ಶ್ರೀರಂಗಕ್ಕೆ ಬಂದು ಕೆಲವು ಕಾಲ ಇದ್ದು ಅವರಿಂದ ಅವರನ್ನು ಹೋಲುವ ಒಂದು ಅರ್ಚಾವಿಗ್ರಹವನ್ನೂ, ಅವರ ತಿರುವಡಿ ನೆಲೆಯನ್ನೂ ತೆಗೆದುಕೊಂಡು ತಮ್ಮ ಊರಿಗೆ ವಾಪಸ್ಸು ಹೋದರು. ಮಣವಾಳ ಮಾಮುನಿಗಳು ಮತ್ತೆ ಆಳ್ವಾರ್ ತಿರುನಗರಿಗೆ ಹೋಗಿ ಅಲ್ಲಿನ ರಾಜನಿಂದ ''ಮುತ್ತರಶನ್'' ಎಂಬ ಗ್ರಾಮವನ್ನು ಪಡೆದು ಅದಕ್ಕೆ ''ಅಳಹಿಯಮಣವಾಳನಲ್ಲೂರು'' ಎಂದು ಹೆಸರನ್ನಿಟ್ಟರು. ಅಲ್ಲಿಂದ ವಾಪಸ್ಸುಹೋಗುವಾಗ ಬಂದು ಹುಣಿಸೇ ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡು ಮುಂದಕ್ಕೆ ಹೊರಡುವಾಗ ಆ ವೃಕ್ಷವು ಮೋಕ್ಷಾನಂದವನ್ನು ಹೊಂದುವಂತೆ ಅಪ್ಪಣೆಕೊಡಲು ಅದು ತಕ್ಷಣ ಬಾಡಿ ಒಣಗಿ ಹೋಯಿತು. ಇದನ್ನುಕಂಡು ಅಲ್ಲಿದ್ದವರೆಲ್ಲರೂ ಆಶ್ಚರ್ಯಪಟ್ಟರು. ಅನಂತರ ಮಣವಾಳ ಮಾಮುನಿಗಳು ಸೇತು, ಶ್ರೀವಿಲ್ಲಿಪುತ್ತೂರು, ತಿರುಮಾಲಿರುಂಶೋಲೈ - ಮುಂತಾದ ಊರುಗಳಿಗೆ ಹೋಗಿ ಅಲ್ಲಿನ ಅರ್ಚಾಮೂರ್ತಿಗಳನ್ನು ದರ್ಶನ ಮಾಡಿ ಮತ್ತೆ ಶ್ರೀರಂಗಕ್ಕೆ ಬಂದು ರಂಗನಾಥನ ಸೇವೆಯಲ್ಲಿ ನಿರತರಾದರು.

ಮಣವಾಳ ಮಾಮುನಿಗಳ ಶ್ರೀಪಾದವನ್ನು ಆಶ್ರಯಿಸಿದವರಲ್ಲಿ ವಾನಮಾಮಲೈಜೀಯರ್, ತಿರುವೇಂಗಡ ಜೀಯರ್, ಪಟ್ಟರ್ ಪಿರಾನ್ ಜೀಯರ್, ಕೋಯಿಲ್ ಕನ್ದಾಡೈ ಅಣ್ಣನ್, ಎರುಮ್ಬಿ ಅಪ್ಪಾ, ಅಪ್ಪಿಳ್ಳೈ, ಅಪ್ಪಿಳ್ಳಾರ್, ಪ್ರತಿವಾದಿ ಭಯಂಕರ ಅಣ್ಣಾ - ಎಂಬ ಎಂಟು ಮಂದಿ ಶಿಷ್ಯರು ಜೀಯರನ್ನು ಎಡೆಬಿಡದೆ ಸೇವಿಸಿಕೊಂಡು ಅಷ್ಟದಿಗ್ಗಜಗಳೆಂಬ ಬಿರುದಾಂಕಿತರಾಗಿದ್ದರು, ಜೀಯರು ಸರ್ವಜ್ಞರಾಗಿ, ತಮ್ಮ ಉಪದೇಶಗಳಿಂದಲೂ, ತಮ್ಮ ಅನುಷ್ಠಾನದಿಂದಲೂ ತಮ್ಮನ್ನು ಆಶ್ರಯಿಸಿದ ಎಲ್ಲಾ ಚೇತನರನ್ನು ಅರ್ಥಪಂಚಕ ನಿಷ್ಠರನ್ನಾಗಿಯೂ, ಚರಮೋಪಾಯ ನಿಷ್ಠರನ್ನಾಗಿಯೂ ಪರಿವರ್ತಿಸಿ ಉಜ್ಜೀವಿಸುವಂತೆ ಕೃಪೆ ಮಾಡಿ ತಮ್ಮ ಅವತಾರದ ಸಂಕಲ್ಪವನ್ನು ಪೂರ್ತಿಗೊಳಿಸಿದರು.

ಅನಂತರ ಮಣವಾಳ ಮಾಮುನಿಗಳಿಗೆ ಪರಮಪದದಲ್ಲಿ ಭಗವಂತನಿಗೆ ಶೇಷವೃತ್ತಿಯನ್ನು ಮಾಡಬೇಕೆಂಬ ತ್ವರೆ ಉಂಟಾಗಿ ಪ್ರಾಪಂಚಿಕ ವಿಷಯಗಳಲ್ಲಿ ವೈರಾಗ್ಯವುಂಟಾಯಿತು. ಇದರಿಂದ ತಮ್ಮ ಅಂತ್ಯಕಾಲವು ಸನ್ನಿಹಿತ ವಾಗುತ್ತಿರುವುದನ್ನು ಅವರು ಅರಿತುಕೊಂಡು ತಮ್ಮ ಶಿಷ್ಯರಿಗೆಲ್ಲಾ ಅನೇಕ ಹಿತವಚನಗಳನ್ನು ಉಪದೇಶಮಾಡಿದರು. ಜೀಯರ್ ನಾಯನಾರ್ರವರ ಮತ್ತು ಅಪ್ಪಿಳ್ಳಾರ್ರವರ ಪ್ರಾರ್ಥನೆಯಂತೆ ಅವರುಗಳಿಗೆ ತಮ್ಮ ತಾಮ್ರದ ಚೆಂಬನ್ನು ಅನುಗ್ರಹಿಸಿ ಅದರಿಂದ ತಮ್ಮನ್ನು ಹೋಲುವ ವಿಗ್ರಹಗಳನ್ನು ಮಾಡಿಸಿಕೊಳ್ಳುವಂತೆ ನಿಯಮಿಸಿದರು. ಮಠದಲ್ಲಿ ನಾಲಾಯಿರ ಸೇವಾಕಾಲವನ್ನು ಮಾಡುವಂತೆ ಎಲ್ಲರಿಗೂ ನಿಯಮಿಸಿ, ಅದನ್ನು ತಾವು ನಾಲ್ಕು ದಿನಗಳು ತದೇಕಚಿತ್ತರಾಗಿ ಕೇಳಿಕೊಂಡು ಕಳೆದರು. ಐದನೆಯ ದಿವಸ ದೇವಸ್ಥಾನದ ಕೈಂಕರ್ಯಪರರನ್ನು ತಮ್ಮ ಹತ್ತಿರ ಕರೆದು ತಮ್ಮ ಅಪರಾಧಗಳನ್ನು ಮನ್ನಿಸುವಂತೆ ಪ್ರಾರ್ಥಿಸಿ, ದೇವರ ಕೈಂಕರ್ಯಗಳನ್ನು ಚೆನ್ನಾಗಿ ನಡೆಸಬೇಕೆಂದು ನಿಯಮಿಸಿ ಅವರನ್ನೆಲ್ಲಾ ಕಳುಹಿಸಿದರು. ಅನಂತರ ವೈಷ್ಣವರಿಗೆಲ್ಲಾ ಭೋಜನ ಮಾಡಿಸಿ ತಂಪು ತೀರ್ಥ ಪ್ರಸಾದಗಳನ್ನುಹೊಂದಿ ''ಪಿಳ್ಳೈ ತಿರುವಡಿಹಳೇ ಶರಣಮ್'', ''ಎಂಬೆರು ಮಾನಾರ್ ತಿರುವಡಿಹಳೇ ಶರಣಮ್'' ಎಂದು ಅಂಜಲಿಹಸ್ತರಾಗಿ ತದೇಕಧ್ಯಾನ ಮಾಡಿ ಪದ್ಮಾಸನದಲ್ಲಿ ಅವರು ಕುಳಿತಿದ್ದಂತೆಯೇ ಬ್ರಹ್ಮರಂಧ್ರವು ಭೇದವಾಗಿ ಜೀಯರು ಪರಮಪದವನ್ನು ಸೇರಿದರು. ಅಲ್ಲಿದ್ದ ಶ್ರೀವೈಷ್ಣವರೆಲ್ಲಾ ಬಹಳದುಃಖಿತರಾಗಿ, ಹೂಗಳಿಂದ ಮಾಮುನಿಗಳ ಚರಮ ವಿಮಲ ವಿಗ್ರಹವನ್ನು ಅಲಂಕರಿಸಿ, ದೇವಸ್ಥಾನದ ಮರ್ಯಾದೆಗಳನ್ನೆಲ್ಲಾ ಮಾಡಿ, ಯಥಾಕ್ರಮವಾಗಿ ಶ್ರೀ ಚೂರ್ಣ ಪರಿಪಾಲನವನ್ನುಮಾಡಿ, ಅಂತ್ಯ ಸಂಸ್ಕಾರ ವಿಧಿಯನ್ನು ಅನುಸರಿಸಿ ಅವರ ಅಂತ್ಯಗಳನ್ನು ಸಾಂಗವಾಗಿ ನೆರವೇರಿಸಿದರು. ಮುಂದೆ ಅವರ ತಿರುವಧ್ಯಯನೋತ್ಸವವನ್ನೂ ವೈಭವದಿಂದ ಸಾಂಗವಾಗಿ ನಡೆಸಿ ಮಾಮುನಿಗಳು ತಮ್ಮಗಳಿಗೆಲ್ಲಾ ಅಪ್ಪಣೆ ಕೊಡಿಸಿದ ತಮ್ಮ ತಮ್ಮ ಕೈಂಕರ್ಯಗಳಲ್ಲಿ ನಿರತರಾದರು.

ಮಣವಾಳ ಮಾಮುನಿಗಳು ದರ್ಶನ ರಹಸ್ಯ ಗ್ರಂಥಗಳಾದ ಮುಮುಕ್ಷುಪ್ಪಡಿ, ತತ್ವತ್ರಯ, ಶ್ರೀವಚನ ಭೂಷಣ, ಆಚಾರ್ಯ ಹೃದಯ, ರಾಮಾನುಜನೂತ್ತಂತಾದಿ - ಇವುಗಳಿಗೆಲ್ಲಾ ಸುಲಭವಾದ ಶೈಲಿಯಲ್ಲಿ ವಾಖ್ಯಾನಗಳನ್ನು ಕೃಪೆ ಮಾಡಿದರು. ಭಗವದ್ವಿಷಯದ ಈಡು ಮುಪ್ಪತ್ತಾರಾಯಿರ ಪಡಿಗೆ ಪ್ರಮಾಣಗಳನ್ನು ಶೇಖರಿಸಿದರು ಮತ್ತು ಭಗವದ್ಗೀತೆಗೆ ಸಾರವನ್ನು ''ತಾತ್ಪರ್ಯದೀಪ''ವೆಂಬ ಗ್ರಂಥದಲ್ಲಿ ತಿಳಿಸಿದರು. ತಿರುವಾಯ್ಮೊಳಿಗೆ ಸಂಗ್ರಹವಾಗಿ ''ತಿರುವಾಯ್ಮೊಳಿ ನೂತ್ತಂದಾದಿ''ಯನ್ನೂ, ಉಪದೇಶರತ್ನ ಮಾಲೈ ಎಂಬ ದಿವ್ಯ ಗ್ರಂಥವನ್ನೂ, ಯತಿರಾಜ ವಿಂಶತಿಯನ್ನೂ, ನಿತ್ಯಾನುಸಂಧೇಯ ಗ್ರಂಥವಾದ ಆರ್ತಿ ಪ್ರಬಂಧವನ್ನೂ ಎಲ್ಲರಿಗೂ ಅನುಗ್ರಹಿಸಿದರು. ಇವರೊಂದಿಗೆ ಗುರುಪರಂಪರೆಯ ಸಾಕ್ಷಾತಾಚಾರ್ಯ ಪರಂಪರೆಯು ಕೊನೆಗೊಂಡಿತು.

★★★★★




ತಿರುಮಲೆ ತಿರುಪತಿ ದೇವಸ್ಥಾನಗಳ ಮುದ್ರಣಾಲಯ ಮೊದಲಿಗೆ 'ಮಹಂತರ ಮುದ್ರಣಾಲಯ' ಎಂಬ ಹೆಸರಿನಲ್ಲಿ ಮದರಾಸಿನ ಕಡಲ ದಂಡೆಯಲ್ಲಿ ಕೆಲಸ ಮಾಡುತ್ತಿದ್ದಿತು. ಮದರಾಸಿನ ಒಂದು ಮುದ್ರಣಾಲಯದಲ್ಲಿ 19 ನೇ ಶತಮಾನದ ಕೊನೆಯ ದಶಕದಲ್ಲಿ ವೆಂಕಟಾಚಲ ಮಹಾತ್ಮೆಯನ್ನು ತೆಲುಗು ಲಿಪಿಯಲ್ಲಿ ಮುದ್ರಿಸಿದರು. ಅದರ ಹಿಂದಿ ಅನುವಾದ - ಸಂಸ್ಕೃತ ಮೂಲದೊಡನೆ - ಮದರಾಸಿನಲ್ಲಿಯೇ ಇದ್ದ ಮಹಂತರ ಮುದ್ರಣಾಲಯದಲ್ಲಿ ಪ್ರಕಟವಾಯಿತು. ಜೊತೆಗೇ ತಿ. ತಿ. ದೇವಸ್ಥಾನಗಳ ಶಾಸನ ಸಂಗ್ರಹಗಳೂ ಅಲ್ಲಿಯೇ ಮುದ್ರಿತವಾಗಿ ಪ್ರಸಿದ್ಧವಾದವು. ಇವೆಲ್ಲ ನಡೆದದ್ದು ಕಾಲಿನಿಂದ ಒತ್ತಿ ನಡೆಸುವ ಮುದ್ರಣ ಯಂತ್ರಗಳ ನೆರವಿನಲ್ಲಿ ಎಂಬುದು ಮುಖ್ಯವಾಗುತ್ತದೆ.

ಎರಡನೆಯ ಮಹಾಯುದ್ಧ ಆರಂಭ ವಾದಾಗ ಮುದ್ರಣಾಲಯವನ್ನು ತಿರುಪತಿಗೆ ವರ್ಗಾಯಿಸಲಾಯಿತು (1942). ಸ್ವಯಂ ಚಾಲಿತ ಗಾಲಿಗಳ ಮುದ್ರಣ ಯಂತ್ರವನ್ನು ಪಡೆದು ಸಾಮರ್ಥ್ಯವನ್ನು ಹೆಚ್ಚಿಸಿಕೊಂಡಿತು. ಈ ಮಧ್ಯದಲ್ಲಿ 1933 ರಲ್ಲಿ ದೇವಾಲಯದ ಆಡಳಿತ ಮಹಂತರಿಂದ, ಸರ್ಕಾರ ನೇಮಕಾತಿ ಮಾಡಿದ ಧರ್ಮದರ್ಶಿ ಮಂಡಳಿಗೆ ಹಸ್ತಾಂತರವಾಯಿತು. ಹೀಗಾಗಿ ಸಿಲಿಂಡರ್ ಮೂಲಕ ನಡೆಯುವ ಹೈಡಲ್‌ಬರ್ಗ್ ಮುದ್ರಣ ಯಂತ್ರಗಳನ್ನೂ, ಮಾನೋಟೈಪ್ ಅಕ್ಷರ ಜೋಡಣೆಯನ್ನೂ ಅಳವಡಿಸಿಕೊಂಡು ಹಲವು ಹನ್ನೊಂದು ದಿಕ್ಕಿನ ಕೆಲಸಗಳನ್ನು ನಡೆಸುವಂತೆ ಆಯಿತು. 1950 ರಲ್ಲಿಯೇ ದೇಶದ ಪ್ರಸಿದ್ಧ ಚಿತ್ರಕಾರರನ್ನು ಆಹ್ವಾನಿಸಿ, ಅವರಿಂದ ಸ್ವಾಮಿಯ ಹಾಗೂ ಅಮ್ಮನವರ ಚಿತ್ರಗಳನ್ನು ಬರೆಯಿಸಿ, ಅವುಗಳಲ್ಲಿನ ಉತ್ತಮವಾದ ಚಿತ್ರಗಳನ್ನು ಆಯ್ಕೆ ಮಾಡಿ (ಡಿ. ರಾಘವರಾವ್ ಅವರ ರಚನೆಯ ಚಿತ್ರ) ತಿ.ತಿ.ದೇ. ಕ್ಯಾಲೆಂಡರ್‌ಗಳನ್ನು ಪ್ರಕಟಿಸಲು ಆರಂಭವಾಯಿತು. ಮೊದಲಿಗೆ ತಾಮ್ರದ ದೊಡ್ಡ ದೊಡ್ಡ ಪಡಿಯಚ್ಚುಗಳೂ, ಮುದ್ರಿತ ಕಾಗದದ ಮೇಲೆ ವಾರ್ನಿಷ್ ಮಾಡುವ ಪದ್ಧತಿಯನ್ನು ಅವಲಂಬಿಸಲಾಗಿದ್ದಿತು. 1949 ರಲ್ಲಿ ಆರಂಭವಾದ ತಿ.ತಿ.ದೇ. ಬುಲೆಟಿನ್ 1970 ರಲ್ಲಿ ''ಸಪ್ತಗಿರಿ'' ಎಂಬ ಹೆಸರು ಪಡೆದು ನಾಲ್ಕು ಭಾಷೆಗಳಲ್ಲಿ ಹೊರಬರುವಂತೆ ಆಯಿತು. ಆಂಗ್ಲಭಾಷೆ ಎಲ್ಲಕ್ಕೂ ಸಾಮಾನ್ಯವಾಗಿದ್ದು 1975 ರಲ್ಲಿ ಪ್ರತ್ಯೇಕವಾಗಿ ಪಂಚ ಭಾಷಾಪತ್ರಿಕೆ ಯಾಯಿತು.

ಕಾರ್ಯನಿರ್ವಹಣಾಧಿಕಾರಿಯಾಗಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ತಿ.ತಿ.ದೇ. ಸೇರಿದ ನಂತರ ತಿ.ತಿ.ದೇ. ಮುದ್ರಣಾಲಯ ಇತೋಪ್ಯತಿಶಯವಾಗಿ ಬೆಳೆಯಿತು ಎನ್ನಬೇಕು. ಹೊಸ ಹೊಸ ಯಂತ್ರಗಳಿಂದ ಕೂಡಿದ ಮುದ್ರಣಾಲಯಾಭಿವೃದ್ಧಿ ಕ್ರಮಾಗತವಾಯಿತು. ಇಲ್ಲಿ ಮೊದಲಿಗೆ ಮೂರು ಆಫ್‌ಸೆಟ್ ಯಂತ್ರಗಳೂ, ಫೋಟೋ ಟೈಪ್‌ಸೆಟ್ ಯಂತ್ರಗಳೂ ಸೇರಿ ಬಂದವು. ಆಂಧ್ರ ಪ್ರದೇಶದ ಸರ್ಕಾರದಲ್ಲಿ ಇಲ್ಲದಂತಹ ಅಭಿವೃದ್ಧಿ ಇದು. ಇದರಿಂದಾಗಿ ಧಾರ್ಮಿಕ ಪುಸ್ತಕ ಪ್ರಕಾಶನಕ್ಕೆ ಇಂಬು ಸಿಕ್ಕಿತು ಎನ್ನಬೇಕು. ಜೊತೆಗೇ ಆಧುನಿಕವಾದ ಪುಸ್ತಕ ಹೊಲಿಗೆ ಯಂತ್ರಗಳೂ, ಕಾಗದ ಕತ್ತರಿಸುವ ಯಂತ್ರಗಳೂ ಸೇರಿ ತಿ.ತಿ.ದೇ. ಪುಸ್ತಕ ಪ್ರಕಾಶನರಂಗದಲ್ಲಿ ಹೆಸರು ಗಳಿಸುವಂತೆ ಆಯಿತು.

ಈ ಮಧ್ಯೆ ತಿ. ತಿ. ದೇವಸ್ಥಾನಗಳಲ್ಲಿನ ವಿವಿಧ ಇಲಾಖೆಗಳೂ ಬೆಳೆದವು. ಇಲಾಖಾವಸರಗಳಾದ ಫಾರಂಗಳು, ಟಿಕೆಟ್‌ಗಳು, ಕರಪತ್ರಗಳೂ - ಎಲ್ಲಕ್ಕೂ ತಿ.ತಿ.ದೇ. ಮುದ್ರಣಾಲಯವೇ ಅಂದೂ ಇಂದೂ ಆಶ್ರಯದಾಣ, ತಯಾರಿಕಾಸ್ಥಳ. ಜೊತೆಗೇ ತಿ.ತಿ.ದೇ. ಶಾಲಾ ಕಾಲೇಜುಗಳ ವಿವಿಧ ಮುದ್ರಣಾವಶ್ಯಕತೆ ಸಹ ಇಲ್ಲಿ ಪೂರೈಕೆ ಆಗತೊಡಗಿತು.

1990 ರಲ್ಲಿ ಫೋಟೋ ಟೈಪ್ ಸೆಟ್ಟಿಂಗ್ ಪದ್ಧತಿಯನ್ನು ಡೆಸ್ಕ್‌ಟಾಪ್ ಪಬ್ಲಿಷಿಂಗ್ ಪದ್ಧತಿಗೆ ಪರಿವರ್ತಿಸಲಾಯಿತು. ನಂತರ ಪೆಂಟಿಯಂ ಕಂಪ್ಯೂಟರ್‌ಗಳಿಂದ ಮತ್ತೂ ಅಭಿವೃದ್ಧಿ ಗೊಳಿಸಲಾಯಿತು. ಮುದ್ರಣ ವಿಭಾಗದಲ್ಲಿ ಎರಡು ಬಣ್ಣದ ಆಫ್‌ಸೆಟ್ ಯಂತ್ರ, ಅಶೋಕ ವೆಬ್ ಆಫ್‌ಸೆಟ್ ಯಂತ್ರಗಳನ್ನು ಉಪಯೋಗಿಸಲು ಆರಂಭಿಸಲಾಯಿತು. ಒಂದು ಬೇಬಿ ಆಫ್‌ಸೆಟ್ ಯಂತ್ರ ಹಾಗೂ ಒಂದು ಪರ್‌ಫೆಕ್ಟ್ ಬೈಂಡಿಂಗ್ ಯಂತ್ರವನ್ನೂ



ಬಳಸಲಾಗುತ್ತಿದೆ. 1980 ರಲ್ಲಿಕೊಂಡುಕೊಂಡಿದ್ದ ಅಡ್ಡನೆಯ ಗ್ಯಾಲಿ ಕ್ಯಾಮರಾವನ್ನು ಬಿಟ್ಟು ಲಂಬ ಛಾಯಾಗ್ರಾಹಕ ಯಂತ್ರದಿಂದಲೂ, ಡಿಜಿಟಲ್ ಪ್ರೋಟೆಕ್ ಪ್ಲೇಟ್ ಎಕ್ಸ್‌ಪೋಸಿಂಗ್ ಯಂತ್ರದಿಂದಲೂ ಕೆಲಸ ನಡೆಸಲಾಗುತ್ತಿದೆ.

ಪ್ರಸ್ತುತ ತಿ.ತಿ.ದೇ. ಮುದ್ರಣಾಲಯದಲ್ಲಿ 120 ಮಂದಿ ಕೆಲಸಗಾರರಿದ್ದಾರೆ. 21 ಮಂದಿ ಆಡಳಿತ ವಿಭಾಗದವರು ಬೇರೆ. ಆಂಧ್ರ ಪ್ರದೇಶದ ಸರ್ಕಾರದ ವತಿಯಿಂದ ಬದಲಿ ಯಾಗಿ ಬರುವಂತಹ ಡೆಪ್ಯೂಟಿ ಡೈರೆಕ್ಟರ್ ಸ್ಥಾಯಿಯ ಪ್ರೆಸ್ ಮ್ಯಾನೇಜರ್ ಇದರ ಅಧಿಕಾರಿಗಳು. **ಶ್ರೀ ಐ. ಪಾರ್ವತೀಶ್ವರ ರಾವ್** ಅವರು ಆಡಳಿತಾಧಿಕಾರಿಯಾಗಿದ್ದಾರೆ. ಇಬ್ಬರು ಸಹಾಯಕ ಮ್ಯಾನೇಜರ್‌ಗಳು - ಶ್ರೀ ಕೆ. ಆರ್. ರವಿಚಂದ್ರನ್ - ಉತ್ಪಾದನಾ ವಿಭಾಗದಲ್ಲಿ ಹಾಗೂ ಆರ್. ಗೋವಿಂದರಾಜುಲು ತಾಂತ್ರಿಕ ಆಡಳಿತ ವಿಭಾಗದಲ್ಲಿ - ಅವರಿಗೆ ನೆರವು ನೀಡುತ್ತಾ ಬಂದಿದ್ದಾರೆ. ಪ್ರತಿ ವಿಭಾಗದಲ್ಲಿಯೂ ಒಬ್ಬೊಬ್ಬ ನಾಯಕ ಮಣಿ - ಫೋರ್ಮನ್ ಇದ್ದಾರೆ. ಡಿ.ಟಿ.ಪಿ. ವಿಭಾಗಕ್ಕೆ (ಕಂಪ್ಯೂಟರ್ ಸೆಕ್ಷನ್) ಸೂಪರ್‌ವೈಸರ್ ಶ್ರೀ ಜಿ. ಪ್ರಭಾಕರ್‌ರವರು.

ತಿ. ತಿ. ದೇವಸ್ಥಾನಗಳ ಎಲ್ಲ ಅಂಗಸಂಸ್ಥೆಗಳ ಅಗತ್ಯಗಳಾದ ರಿಜಿಸ್ಟರ್‌ಗಳು, ಫಾರಂಗಳು, ರಸೀದಿ ಪುಸ್ತಕಗಳು ಈ ಮುದ್ರಣಾಲಯವೇ ಒದಗಿಸುತ್ತಿದೆ. ಧರ್ಮಪ್ರಚಾರ ಪರಿಷತ್ತಿನ ಉಚಿತ ಸಾಹಿತ್ಯ ವಿತರಣ ಯಜ್ಞದ ಎಲ್ಲ ಪುಸ್ತಿಕೆಗಳನ್ನೂ ಇಲ್ಲಿಯೇ ಮುದ್ರಿಸಲಾಗುತ್ತಿದೆ.

ಸಪ್ತಗಿರಿ ಮಾಸಪತ್ರಿಕೆ - ತಿಂಗಳೂ ಸರಾಸರಿ ಐವತ್ತು ಸಾವಿರ ಪ್ರತಿಗಳು ಪ್ರಕಟವಾಗುತ್ತಿದೆ. ಪ್ರತಿವರ್ಷವೂ ಐದಾರು ಲಕ್ಷ ಪ್ರತಿಗಳು ತಿ.ತಿ.ದೇ. ಕ್ಯಾಲೆಂಡರುಗಳನ್ನು ಮುದ್ರಿಸ ಲಾಗುತ್ತದೆ. ತಿ. ತಿ. ದೇವಸ್ಥಾನಗಳ ಎಲ್ಲ ಕಾರ್ಯಕ್ರಮ ಆಹ್ವಾನ ಪತ್ರಗಳು, ಕರಪತ್ರಗಳು, ಯಾತ್ರಿಕ ಸೂಚನಾಪತ್ರಗಳೂ ಇಲ್ಲಿಯೇ ಪ್ರಕಟವಾಗುತ್ತವೆ. ಜೊತೆಗೇ ಎಂಟು ಹತ್ತು ಬಗೆಯ ಪ್ರತಿಯೊಂದೂ ಹತ್ತು ಹದಿನೈದುಸಾವಿರದ ವರ್ಣಚಿತ್ರಗಳ ಶುಭಾಶಯ ಪತ್ರಗಳು ಇಲ್ಲಿಯೇ ಮುದ್ರಣವಾಗುತ್ತವೆ.



ಕಳೆದ ಒಂದು ನೂರು ವರ್ಷಗಳಲ್ಲಿ ಎಪ್ಪತ್ತೈದು ವರ್ಷಗಳಿಂದ ತಿ.ತಿ.ದೇ. ಮುದ್ರ ಣಾಲಯ ಕೆಲಸ ಮಾಡುತ್ತ ಬಂದಿದೆ. ಈ ಒಂದು ನೂರು ವರ್ಷಗಳಲ್ಲಿ ಕನಿಷ್ಠ ಒಂದು ಸಾವಿರ ಪುಸ್ತಕಗಳನ್ನು ಪ್ರಕಟಿಸಿದ್ದಾಗಿದೆ ಎಂದು ನಿಸ್ಸಂ ಕೋಚವಾಗಿ ನಿರ್ಧಾರ ಮಾಡಬಹುದಾಗಿದೆ.

ಈ ಸಾವಿರ ಪುಸ್ತಕಗಳಲ್ಲಿ ಹಲವು ಹನ್ನೊಂದು ಹಲವು ಹತ್ತು ಬಾರಿ ಪುನರ್ಮುದ್ರಣ ಆಗಿವೆ. ಭಗವದ್ಗೀತೆ, ಸುಪ್ರಭಾತ, ರಾಮಾಯಣ ಮಹಾಭಾರತ ಮೊದಲಾದವು ಎಂಟು ಹತ್ತು ಮುದ್ರಣಗಳಲ್ಲಿ ತೆಲುಗು, ಕನ್ನಡ, ತಮಿಳು, ಹಿಂದಿ, ಆಂಗ್ಲ ಭಾಷೆಗಳಲ್ಲಿ ಪುನರ್ಮುದ್ರಣ ಹೊಂದಿವೆ. ಪರಿಷ್ಕೃತಗೊಂಡಿವೆ. ಹಲವು ಪ್ರತಿಷ್ಠಾತ್ಮಕ ಪ್ರಕಟನೆಗಳೆಂದರೆ - ಭರತಕೋಶ (ಭರತ ಶಾಸ್ತ್ರದ ವಿಶ್ವಕೋಶ.). ಪೋತನ ಭಾಗವತ, ಋಗ್ವೇದ (5 ಸಂಪುಟಗಳು) ಕೃಷ್ಣಯಜುರ್ವೇದ, ಆರ್ಷವಿಜ್ಞಾನ ಸರ್ವಸ್ವ, ಕನ್ನಡದಲ್ಲಿ ಹರಿದಾಸರು ಹರಿಯನ್ನು ಕುರಿತು ಹಾಡಿದ ಹಲವು ಹೊತ್ತಗೆಗಳು ಹಲವು ಮುದ್ರಣಗಳನ್ನು ಕಂಡಿದೆ.

ಈಗ ಆಂಧ್ರಭಾರತ ಸವ್ಯಾಖ್ಯಾನ ಸಂಪುಟಗಳಲ್ಲಿನ ಅರಣ್ಯಪರ್ವ ಭಾಗಗಳು, ವೇದಾಂತ ಪಂಚದಶಿ ಮೊದಲಾದ ಹಿರಿಮೆಯ ಗ್ರಂಥಗಳೊಂದಿಗೆ ಸುಮಾರು ನೂರೈವತ್ತು ಪುಸ್ತಕಗಳು ಮುದ್ರಣ ಹಂತದಲ್ಲಿವೆ. ಮತ್ತೊಂದು ನೂರು ಪುಸ್ತಕ ವಿವಿಧ ಹಂತದಲ್ಲಿ ಸಿದ್ಧವಾಗಿ ಕಾದುನಿಂತಿವೆ. ಯಂತ್ರ ನಡೆಯುತ್ತಿದೆ ನಿರಂತರವಾಗಿ. ★

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

ಆಂಗ್ಲಮೂಲ : **ಡಾ॥ ಎನ್. ರಮೇಶ್,** ಐ.ಎ.ಎಸ್.
ಕನ್ನಡಾನುವಾದ : **ಬಿ. ಎನ್. ಶ್ರೀನಿವಾಸನ್.** ಎಂ.ಎ.

## ಒಟ್ಟುನೋಟ - 2

(ಮುಂದುವರೆದಿದೆ.)

**ದೇವಾಲಯದ ಪೂಜೆ :**

ತಿರುಮಲೆಯ ಆಲಯದಲ್ಲಿನ ಪೂಜಾದಿಗಳು ವೈಖಾನಸ ಆಗಮದ ಪ್ರಕಾರ ನಡೆಯುತ್ತಿವೆ. ಭವಿಷ್ಯೋತ್ತರ ಪುರಾಣವು ಹೇಳುವಂತೆ - ವೈಖಾನಸ ಮಹರ್ಷಿಗೆ ದ್ವಾಪರಯುಗದ ಶ್ರೀಕೃಷ್ಣನು ಪ್ರತ್ಯಕ್ಷನಾಗಿ ತನ್ನನ್ನು ಶ್ರೀನಿವಾಸನೆಂದು ಬಗೆದು ಪೂಜಿಸಲು ಹೇಳಿದನು. ಶೇಷಾಚಲಕ್ಕೆ ಹೋದರೆ, ಅಲ್ಲಿ ಹುತ್ತದೊಳಗಿರುವ ಶ್ರೀನಿವಾಸರೂಪಿಯಾದ ತನ್ನನ್ನು ಗುರುತಿಸುವಲ್ಲಿ ರಂಗದಾಸನೆಂಬ ಒಬ್ಬನು ಅವರಿಗೆ ನೆರವು ನೀಡುವನೆಂಬುದಾಗಿಯೂ ತಿಳಿಸಿದನು. ವೈಖಾನಸ ಋಷಿಯು ತಿರುಮಲೆಗೆ ಬಂದು ರಂಗದಾಸನ ಸಹಾಯವನ್ನು ಪಡೆದು ಶ್ರೀನಿವಾಸನನ್ನು ಕಂಡು ಕೊಂಡರು. ಹೀಗಾಗಿ ಶ್ರೀನಿವಾಸನನ್ನು ಅರ್ಚಿಸಿದ ಮೊದಲನೆಯ ಋಷಿ ವೈಖಾನಸ ಮಹರ್ಷಿ. ಇದರಿಂದಾಗಿ ವೈಖಾನಸ ಮಹರ್ಷಿ ಪೂಜೆ ಮಾಡಿದ ರೀತಿಯಲ್ಲಿಯೇ ಇಂದಿಗೂ ಪೂಜೆಗಳು ನಡೆಯುತ್ತಿವೆ.

**ಕೊಲುವು (ಓಲಗ) :**

ಕೊಲುವು ಶ್ರೀನಿವಾಸನ ದರ್ಬಾರ್ ಅನ್ನು ಕೊಲುವು ಎನ್ನುವರು. ಪ್ರತಿದಿನ ನಿತ್ಯಾರ್ಚನೆ ಆರಂಭವಾಗುವ ಮೊದಲು ಸ್ನಪನ ಮಂಟಪದಲ್ಲಿ ಕೊಲುವು ನಡೆಯುವುದು. ಈ ಓಲಗದಲ್ಲಿ ದಿನದ ಪಂಚಾಂಗವನ್ನು ಓದಿ ಸ್ವಾಮಿಗೆ ತಿಳಿಸಿ ಹಿಂದಿನದಿನದ ಆದಾಯ ವೆಚ್ಚಗಳನ್ನು ಸ್ವಾಮಿಗೆ ತಿಳಿಸುವರು.

**ತಿರುಮಲೆಯಲ್ಲಿ ಮುಡಿ ನೀಡುವಿಕೆ :**

ತಿರುಮಲೆಯ ಮತ್ತೊಂದು ವೈಶಿಷ್ಟ್ಯದ ಆಚಾರವೆಂದರೆ ಮುಡಿ ನೀಡುವಿಕೆ. ತಿರುಮಲೆಗೆ ಬರುವ ಯಾತ್ರಿಕರು ತಮ್ಮ ತಲೆಯ ಕೂದಲನ್ನು ಸಾಧಾರಣವಾಗಿ ಸ್ವಾಮಿಗೆ ಸಮರ್ಪಣೆ ಮಾಡುತ್ತಾರೆ. ಅಗತ್ಯಗಳಿಗೆ ತಕ್ಕಂತೆ ದೇವರನ್ನು ವಿವಿಧ ವಸ್ತು ವಿಷಯಗಳಿಗಾಗಿ ಬೇಡುವವರು, ಸಾಮಾನ್ಯವಾಗಿ ತಮ್ಮ ಬೇಡಿಕೆ ಈಡೇರಿದ್ದರ ಗುರುತಾಗಿ, ಕೃತಜ್ಞತೆಯ ಕುರುಹಾಗಿ ಸ್ವಾಮಿಗೆ ಮುಡಿಯನ್ನು ಒಪ್ಪಿಸುವುದುಂಟು. ಇದಕ್ಕಾಗಿ ಪ್ರತ್ಯೇಕವಾಗಿರುವ ಕಲ್ಯಾಣಕಟ್ಟೆಯಲ್ಲಿ ಮುಡಿಯನ್ನು ಒಪ್ಪಿಸಿ ಪುಷ್ಕರಿಣಿಯಲ್ಲಿ ಸ್ನಾನಮಾಡುವರು. ನಂತರ ಸ್ವಾಮಿದರ್ಶನಕ್ಕೆ ಆಲಯಕ್ಕೆ ಬರುತ್ತಾರೆ.



ತಿರುಮಲೆಯ ಆಲಯದ ಶಾಸನಗಳು ಅನ್ನಪ್ರಸಾದಗಳ ನಿವೇದನೆಯೇ ಮೊದಲಾದವುಗಳ ಬಗ್ಗೆ ತಿಳಿಸಿಕೊಡುತ್ತವೆ. ಆದರೆ ಯಾವುದೇ ಶಾಸನವೂ ಮುಡಿಕೊಡುವ ಈ ಸಂಪ್ರದಾಯದ ಬಗ್ಗೆ ಹೇಳುವುದಿಲ್ಲ. ಈಗಾಗಲೇ ತಿಳಿಸಿರುವಂತೆ 1831 ರಲ್ಲಿ ಈ ಭಾಗದ ಒಬ್ಬ ಜಿಲ್ಲಾ ಕಲೆಕ್ಟರನು ಏಸಿಯಾಟಿಕ್ ಜರ್ನಲ್‌ನಲ್ಲಿ ಬರೆದಿರುವ ಲೇಖನದಲ್ಲಿ ಈ ಬಗ್ಗೆ ಉಲ್ಲೇಖವುಂಟು. ''ಸಾಮಾನ್ಯವಾಗಿ ಅನುಕೂಲಗಳನ್ನು ಪಡೆವ ಆಸಕ್ತಿಯಿಂದ ಕಾಣಿಕೆಗಳನ್ನು ಸಮರ್ಪಿಸಲಾಗುತ್ತದೆ. ಇದರ ವೈವಿಧ್ಯ ಅಪಾರ. ಚಿನ್ನ, ಬೆಳ್ಳಿ, ಎಲ್ಲರೀತಿಯ ನಾಣ್ಯಗಳು, ರೂಪಾಯಿಗಳ ಚೀಲಗಳು, ತಾಮ್ರದ ಕಾಸುಗಳು, ಧಾನ್ಯಗಳು, ಇಂಗು, ಬಾಲ್ಯದಿಂದ ತಲೆಯಲ್ಲಿ ಬೆಳೆದ ಕೂದಲು - ಸುಂದರವಾದ ಹೆಣ್ಣುಗಳ ಉದ್ದ ಬೆಳೆದ ಜಡೆಗಳನ್ನು ತಂದೆ ತಾಯಿಯರ ಬಯಕೆಗೆ ತಕ್ಕಂತೆ ಹರಕೆಗೆ ತಕ್ಕಂತೆ ಕತ್ತರಿಸಿ ನೀಡುವಿಕೆ ಉಂಟು.'' ಮೇಲಿನ ಉಲ್ಲೇಖದಿಂದ ಸ್ಪಷ್ಟವಾಗುವ ಅಂಶವೆಂದರೆ ಈ ಪದ್ಧತಿ 1831 ರಲ್ಲಿ ಜಾರಿಯಲ್ಲಿದ್ದಿತು ಎಂಬುದು. (ಜೊತೆಗೇ ಸ್ಟ್ಯಾಟನ್ 1802 ರಲ್ಲಿ ಬರೆದ ವರದಿಯಲ್ಲಿಯೂ ಮುಡಿಕತ್ತರಿಸುವ ಕ್ಷೌರಿಕ ಗುತ್ತಿಗೆಯ ಬಗ್ಗೆ ಮಾತನಾಡುವುದನ್ನು ಕಾಣಬಹುದಾಗಿದೆ.)

ಧಾರ್ಮಿಕ ವಿಧಿಯ ಒಂದಂಗವಾಗಿ ತಲೆಗೂದಲನ್ನು ತೆಗೆಯುವುದು ಪ್ರಾಚೀನ ಪದ್ಧತಿಯೆನ್ನಬೇಕು.

ಪ್ರಾಚೀನ ನಾಗರಿಕತೆಗಳಲ್ಲಿ ಕೂದಲಿಗೆ ಮಾಂತ್ರಿಕ ಶಕ್ತಿಗಳಿದ್ದವೆಂಬುದನ್ನು ಆರೋಪಿಸುವುದನ್ನು ಸಾಹಿತ್ಯದ ತೌಲನಿಕ ಅಧ್ಯಯನದಿಂದ ತಿಳಿಯಬಹುದಾಗಿದೆ. ಕೂದಲು ಮನುಷ್ಯನ ಅಧಿಕಾರದ ಮೂಲವೆಂದೂ ಅವನ ಶಕ್ತಿಯ ಸಂಕೇತವೆಂದೂ ತಿಳಿದದ್ದುಂಟು. ಈ ಕಾರಣದಿಂದಾಗಿಯೇ ಪ್ರಾಚೀನ ಬುಡಕಟ್ಟುಗಳಲ್ಲಿ ದುಷ್ಟ ಶಕ್ತಿಗಳಿಂದ ಕೂದಲನ್ನು ರಕ್ಷಿಸಿಕೊಳ್ಳುವ ಪ್ರಯತ್ನಗಳು ಕಂಡುಬರುತ್ತವೆ. ಈ ಕಾರಣದಿಂದಾಗಿಯೇ ಮುಡಿ ಕೊಡುವುದನ್ನು ದೇವತೆಗಳ ಪಿತೃಗಳ ಕೈಂಕರ್ಯದಲ್ಲಿ ಒಂದು ಮುಖ್ಯವಾದ ಅಂಗವೆಂಬುದಾಗಿ ಪರಿಗಣಿಸಲ್ಪಟ್ಟಿದೆ. ಡಬ್ಲ್ಯೂ, ಆರ್. ಸ್ಮಿತ್ ಅವರು ಈ ಧಾರ್ಮಿಕ ವಿಧಿಗಳನ್ನು ಜಾಗ್ರತೆಯಿಂದ

ಅಧ್ಯಯನಮಾಡಿ - ಮುಡಿ ನೀಡುವಿಕೆಯನ್ನು ರಕ್ತವನ್ನು ಅರ್ಪಿಸುವುದರ ಸಂಕೇತವೆಂದೂ, ಈ ಪ್ರಕ್ರಿಯೆಯು ಮನುಷ್ಯ ಹಾಗೂ ಅದನ್ನು ನೀಡುವ ದೇವರ ನಡುವಣ ಸಂಬಂಧಕ್ಕೆ ಒತ್ತು ನೀಡಿ ಹೇಳುವುದೆಂದೂ - ತಿಳಿಸುತ್ತಾರೆ.

ಭಾರತದಲ್ಲಿ ಕೂದಲನ್ನರ್ಪಿಸುವುದು ವೇದಗಳಷ್ಟೇ ಪ್ರಾಚೀನವಾದದ್ದು. ಚಾತುರ್ಮಾಸ್ಯ, ಅಗ್ನಿಷ್ಟೋಮ ಮುಂತಾದ ವೈದಿಕ ಕ್ರಿಯೆಗಳಲ್ಲಿ ಈ ಕೂದಲಿನ ಕಾಣಿಕೆ ಪ್ರಚಲಿತವಿದ್ದಿತು.

ಸೂತ್ರ ಸಾಹಿತ್ಯದಲ್ಲಿ ಹೇಳಿರುವಂತೆ ರಾಜ್ಯ ಪಟ್ಟಾಭಿಷೇಕದಲ್ಲಿ ಕೇಶವಪನ ಒಂದು ಅಗತ್ಯ ವಿಧಿಯಾಗಿದ್ದಿತು. ಮಧ್ಯಕಾಲೀನ ಪುರಾಣಗಳು ಹಾಗೂ ನಿಬಂಧಗಳು ತೀರ್ಥಕ್ಷೇತ್ರಗಳಲ್ಲಿ ಮುಡಿ ನೀಡುವುದನ್ನು, ದೇವ ಪಿತೃಗಳನ್ನು ಸಂತಸಪಡಿಸುವ ಒಂದು ಕ್ರಮವೆಂದು ತಿಳಿಸುತ್ತವೆ. ಸಾಂಬ ಉಪಪುರಾಣವು ಭಕ್ತರು ತಮ್ಮ ತಲೆಯ ಕೂದಲನ್ನು ತೆಗೆಯಬೇಕೆಂದೇ ಹೇಳುತ್ತದೆ. ಪ್ರಮುಖ ತೀರ್ಥಗಳಲ್ಲಿ ಮುಡಿ ನೀಡುವಿಕೆಗೆ ಪ್ರಾಧಾನ್ಯವಿದ್ದುದರಿಂದಲೇ ಮುಖ್ಯ ಆಲಯಗಳಲ್ಲಿ ಕ್ಷೌರಿಕರು ಇಡುತ್ತಿದ್ದರು. ಹನ್ನೊಂದನೆಯ ಶತಮಾನದಲ್ಲಿ ಸೋಮನಾಥ ಆಲಯದಲ್ಲಿ ಮುನ್ನೂರು ಮಂದಿ ಕ್ಷೌರಿಕರು ಇದ್ದರೆಂದು ದಾಖಲೆಯಾಗಿದೆ. ಆಧುನಿಕ ಕಾಲದಲ್ಲಿಯೂ ಸಹ ತೀರ್ಥಯಾತ್ರೆಯ ಒಂದು ಅಂಗವೇ ಆಗಿ ಮುಡಿನೀಡುವಿಕೆಯನ್ನು ಪರಿಗಣಿಸಲಾಗಿದೆ.

ಮಾತೃಶಕ್ತಿಯ ಆರಾಧನೆಯಲ್ಲಿ ಮುಡಿ ನೀಡುವಿಕೆಯು ಒಂದು ಪ್ರಧಾನವಾದ ವಿಧಿಯಾಗಿದೆ. ಏಳನೇ ಶತಮಾನದ ಮಹಾಬಲಿಪುರದ ಶಿಲ್ಪಗಳಲ್ಲಿ ದೇವಿಗೆ ಮುಡಿ ನೀಡುತ್ತಿರುವ ಭಕ್ತನನ್ನು ಚಿತ್ರಿಸಲಾಗಿದೆ. ಎಂಟನೆಯ ಶತಮಾನದಲ್ಲಿ ಕನೋಜ್‌ನಲ್ಲಿದ್ದ ವಾಕ್ಪತಿಯು ವಿಂಧ್ಯವಾಸಿನೀ ದೇವಿಯ ಆಲಯದಲ್ಲಿ ಮುಡಿ ನೀಡಿದ್ದನ್ನು ಹೇಳುತ್ತಾನೆ.

ನಾಥಪಂಥೀಯರಲ್ಲಿ ಇಂದಿಗೂ ಶಿಖೆಯನ್ನು ಅರ್ಪಿಸುವ ಆಚಾರ ಪ್ರಚಲಿತ. ಸಾಮಾನ್ಯರು ಮುಡಿ ನೀಡಿದ ನಂತರ ಮತ್ತೊಮ್ಮೆ ಯಾವುದಾದರೂ ಆಲಯವನ್ನು ದರ್ಶಿಸುವವರೆಗೆ ಕೂದಲನ್ನು ಬೆಳೆಯಗೊಟ್ಟರೆ, ಇಲ್ಲಿ ಅವರು ಮುಡಿಯನ್ನು ಕತ್ತರಿಸಿ ನಿವೇದನೆ ಮಾಡುತ್ತಾರೆ.

ತೀರ್ಥಯಾತ್ರೆ ಹೊರಟಾಗ ತಲೆಬೋಳಿಸ ಬೇಕೆಂದು ಧರ್ಮಶಾಸ್ತ್ರಗಳೂ ಹೇಳುತ್ತವೆ.

ತೀರ್ಥಯಾತ್ರೆ ಹೊರಟಾಗ ಮೊದಲಿಗೆ ತಲೆಗೂದಲನ್ನು ಕತ್ತರಿಸಿಕೊಳ್ಳಬೇಕೆ ಬೇಡವೇ ಎಂಬುದರ ಬಗ್ಗೆ ಧರ್ಮಶಾಸ್ತ್ರಗಳಲ್ಲಿ ಭಿನ್ನಾಭಿಪ್ರಾಯಗಳಿವೆ. ಪದ್ಮಪುರಾಣ ಸ್ಕಂದ ಪುರಾಣಗಳು ತಲೆಗೂದಲನ್ನು ತೆಗೆಯುವುದು ಅತ್ಯಗತ್ಯ ಎನ್ನುವಂತಿದ್ದರೆ, 'ತೀರ್ಥ ಕಲ್ಪತರು'ವು ತಲೆಗೂದಲ ಬಗ್ಗೆ ಮಾತನ್ನೇ ಆಡುವುದಿಲ್ಲ. ತೀರ್ಥಕ್ಷೇತ್ರದಲ್ಲಿ ಒಂದು ಹೊತ್ತು ಉಪವಾಸವಿರುವುದು ಐಚ್ಛಿಕ ಎಂದು ಈ ಗ್ರಂಥವು ತಿಳಿಸುತ್ತದೆ. ನಂತರದ ಲೇಖಕರಲ್ಲಿನ ಒಂದು ಆಸಕ್ತಿ ಎಂದರೆ ಎಲ್ಲ ರೀತಿಯ ವಿಧಿ ವಿಧಾನಗಳನ್ನು ಕಠಿಣತರಗೊಳಿಸುವುದು. ಅಗ್ನಿಷ್ಟೋಮ ಚಾತುರ್ಮಾಸ್ಯಗಳ ಆರಂಭದಲ್ಲಿ ತಲೆಗೂದಲನ್ನು ತೆಗೆಯುವುದು ಅಗತ್ಯ ವೈದಿಕ ವಿಧಿಯಾಗಿದ್ದರೆ ಶಿಕ್ಷಣವನ್ನು ಮುಗಿಸಿದಾಗಲೂ (ಸಮಾವರ್ತನ) ಸಹ ತಲೆಗೂದಲನ್ನು ತೆಗೆಯುವುದು ವೈದಿಕವೇ ಆಗಿದ್ದಿತು. ಪಾಪಗಳನ್ನು ಪ್ರಾಕ್ಷಾಳನ ಮಾಡಿಕೊಳ್ಳುವ ಪ್ರಾಯಶ್ಚಿತ್ತ ವಿಧಿಗಳಲ್ಲಿಯೂ ತಲೆಗೂದಲನ್ನು ತೆಗೆಯುವುದಿದೆ. ತೀರ್ಥ ಪ್ರಕಾಶ ಹಾಗೂ ತೀರ್ಥ ಚಿಂತಾಮಣಿ - ಎರಡೂ ಕೃತಿಗಳು ಸ್ಮೃತಿ ಸಮುಚ್ಚಯದ ಒಂದು ಮಾತನ್ನು ಉಲ್ಲೇಖಿಸುತ್ತವೆ.

ಪ್ರಯಾಗೇ ತೀರ್ಥಯಾತ್ರಾಯಾಂ
ಪಿತೃಮಾತೃ ವಿಯೋಗತಃ
ಕಚಾನಾಂ ವಪನಂ ಕುರ್ಯಾತ್
ವೃಥಾ ನ ವಿಕಚೋ ಭವೇತ್

ಪ್ರಯಾಗಕ್ಕೆ ತೀರ್ಥಯಾತ್ರೆಗೆ ಹೋದಾಗ ತಾಯಿತಂದೆಯರು ಮರಣ ಹೊಂದಿದರೆ ಮಾತ್ರವೇ ತಲೆಗೂದಲನ್ನು ತೆಗೆಯಬೇಕು. ಇಲ್ಲದಿದ್ದಲ್ಲಿ ಕಾರಣವಿಲ್ಲದೆ ತೆಗೆಯಬಾರದು. ಯಾಜ್ಞವಲ್ಕ್ಯನ ಮಿತಾಕ್ಷರವು ಹೀಗೆ ಹೇಳುತ್ತದೆ- ಗಂಗಾನದಿಯ ದಡದಲ್ಲಿ, ಭಾಸ್ಕರ ಕ್ಷೇತ್ರದಲ್ಲಿ, ತಂದೆ, ತಾಯಿ, ಗುರುಗಳ ಮರಣದಲ್ಲಿ, ವೈದಿಕ ಅಗ್ನಿಯ ಪ್ರತಿಷ್ಠಾಪನೆಯಲ್ಲಿ, ಸೋಮಯಜ್ಞದಲ್ಲಿ - ಈ ಏಳು ಸಂದರ್ಭಗಳಲ್ಲಿ ತಲೆಕೂದಲನ್ನು ತೆಗೆಯಬೇಕು.

ತೀರ್ಥಚಿಂತಾಮಣಿ, ತೀರ್ಥ ಪ್ರಕಾಶ ಗಳೆರಡೂ ಒಂದು ಪದ್ಯದಲ್ಲಿ ಹೇಳುವಂತೆ ಎಲ್ಲ ಕ್ಷೇತ್ರಗಳಲ್ಲಿಯೂ ತಲೆಗೂದಲನ್ನು ತೆಗೆದು ಉಪವಾಸ ಮಾಡಬೇಕು. ಆದರೆ ಕುರುಕ್ಷೇತ್ರ, ವಿಶಾಲಾ (ಉಜ್ಜಯಿನಿ ಅಥವಾ ಬದರಿಕ) ವಿರಜಾ (ಒರಿಸ್ಸಾದ ನದಿ) ಗಯಾ ಕ್ಷೇತ್ರದಲ್ಲಿ ಮಾತ್ರ ಇವುಗಳು ನಿಷಿದ್ಧ. ಸ್ನಾತಕರ ವಿಷಯದಲ್ಲಿ ಅವರ ತಲೆಯ ಮುಡಿಯ ಗಂಟಿನ ಹೊರತು ಎಲ್ಲ ಕೂದಲೂ ತೆಗೆಯಬೇಕು. ಸುಮಂಗಲೆಯಾದ ಹೆಂಗಸಿನ ವಿಷಯದಲ್ಲಿ ಎರಡು ಬೆರಳಿನಷ್ಟು ಮಾತ್ರ ತಲೆಗೂದಲನ್ನು ತೆಗೆಯಬೇಕು. ವೃದ್ಧಹಾರೀತ ಶಾಸ್ತ್ರಹೇಳುವಂತೆ ಸುಮಂಗಲಿಯರ ತಲೆಗೂದಲನ್ನು ತೆಗೆಯಬಾರದು. ತಲೆಗೂದಲಿನಲ್ಲಿ ಮೂರು ಬೆರಳಷ್ಟು ಅಗಲದ ಉದ್ದ ಕೂದಲನ್ನು ಕತ್ತರಿಸಬೇಕು. ಮಿಕ್ಕಂತೆ ಹಲವು ಸ್ಮೃತಿಗಳು ಎರಡು ಬೆರಳಿನಷ್ಟು ತೆಗೆದರೆ ಸಾಕೆನ್ನುತ್ತವೆ.

ಕ್ಷೌರ ಹಾಗೂ ಮುಂಡನಗಳಲ್ಲಿ ವ್ಯತ್ಯಾಸಗಳನ್ನು ಶಾಸ್ತ್ರಗಳು ಗುರುತಿಸುತ್ತವೆ. ಮುಂಡನವೆಂದರೆ ಮೀಸೆ ಗಡ್ಡಗಳನ್ನು ತಲೆಗೂದಲೊಡನೆ ತೆಗೆಯುವುದು. ಕ್ಷೌರವೆಂದರೆ ತಲೆ ಬೋಳಿಸುವಿಕೆ ಮಾತ್ರ. ಹೀಗಾಗಿ ನಾರದೀಯವು ಗಯಾದಲ್ಲಿ ಕ್ಷೌರವನ್ನು ನಿಷೇಧಿಸಿಲ್ಲವೆಂದೂ ಮುಂಡನ ಮಾತ್ರ ನಿಷಿದ್ಧವೆಂದೂ ಹೇಳುತ್ತದೆ. ಪ್ರಯಾಗದ ಹೊರತಾಗಿ ಗಂಗಾನದಿಯ ದಡದಲ್ಲಿ ಬೇರೆಲ್ಲಿಯೂ ಮುಂಡನವಿಲ್ಲ. ತೀರ್ಥೇಂದು ಶೇಖರವು ಮುಡಿ ತೆಗೆಯುವುದು ಉಪವಾಸಗಳೆರಡೂ ವಿಧಿಗಳಲ್ಲದೆ ಕಾಮ್ಯಗಳು ಎನ್ನುತ್ತದೆ. ಎಂದರೆ ಕೆಲವು ಅಭೀಷ್ಟಗಳು ನೆರವೇರಿದಾಗ ಮಾಡುವಂತಹವು. ಹೀಗಾಗಿ ಶಿಷ್ಟರು ಈ ಎರಡನ್ನೂ ಹಲವು ತೀರ್ಥಗಳಲ್ಲಿ ಕೈಗೊಳ್ಳುವುದಿಲ್ಲ ಎನ್ನುತ್ತದೆ.

ಮುಡಿ ನೀಡುವುದನ್ನು ಹಲವು ಸಂದರ್ಭಗಳಲ್ಲಿ ಮಾಡಿಸಬೇಕು.

ವಿಷ್ಣುಪುರಾಣವು ಹೇಳುವಂತೆ ಪ್ರಯಾಗದಲ್ಲಿ ತೀರ್ಥಯಾತ್ರೆಯ ಸಂದರ್ಭದಲ್ಲಿ ಮುಂಡನ ಮಾಡಿಸಬೇಕು. ತಂದೆ ತಾಯಿ ತೀರಿಕೊಂಡಾಗ ಮಾಡಿಸಬೇಕು. ವ್ಯರ್ಥವಾಗಿ ಕಾರಣವಿಲ್ಲದೆ ಮಾಡಿಸಬಾರದು. ಹೀಗೆ ಮುಡಿ ಕೊಡುವುದು ಹಲವು ಬಾರಿ ಕಾಮ್ಯವಾಗಿ ಎಂದರೆ ಅಭೀಷ್ಟ ಪೂರ್ತಿ ಆದದ್ದರಿಂದ ಕೊಡುವುದೂ ಹಲವು ಬಾರಿ ತಪಶ್ಚರ್ಯೆಯ ಭಾಗವಾಗಿ ಕೊಡುವುದೂ, ತೀರ್ಥಯಾತ್ರೆಯಲ್ಲಿ - ಕೊಡುವುದೂ ಉಂಟು.

**ಭಕ್ತಿ :**

ಏಳ ಮಲೆಗಳೊಡೆಯನು ವಿಶ್ವದ ಒಡೆಯನೂ ಆಗಿದ್ದಾನೆ. ಎಲ್ಲ ಸೃಷ್ಟಿಯ ಒಡೆಯ, ಜಗತ್ತಿನ ಬೆಳಕು. ಅವ್ಯಕ್ತನಾದರೂ ಸಗುಣನಾಗಿ ಕಟ್ಯವಲಂಬಿತ ಹಸ್ತನಾಗಿ ನಮ್ಮಗಳ ಉದ್ಧಾರಕ್ಕಾಗಿ ತಿರುಮಲೆಯಲ್ಲಿ ನೆಲೆಸಿದ್ದಾನೆ. ಆತನ ಪಾದಾರವಿಂದಗಳನ್ನು ಆಶ್ರಯಿಸಿದವರಿಗೆ ಎಲ್ಲ ಕಾಲ ದೇಶ ಅವಸ್ಥೆಗಳಲ್ಲಿಯೂ ಮುಕ್ತಿ ದೊರೆಯುವುದೆಂದು ಸಾರುವಂತೆ ಇದೆ - ಈ ಹಸ್ತಚಿಹ್ನೆ. ದೇವದೇವನಾದ ಆತನ ವರದಹಸ್ತವು ಬೇಡಿದವರಿಗೂ ಬೇಡದವರಿಗೂ ಅಭಯವನ್ನು ನೀಡುತ್ತದೆ. ಸೂರ್ಯನ ಬೆಳಕು ಎಲ್ಲೆಡೆಯೂ ಸಮಾನವಾಗಿ ಹರಿಯುವಂತೆಯೇ ಆತನ ಕರುಣೆಯೂ ಸಹ ಎಲ್ಲೆಡೆಗೂ ಸಮಾನವಾಗಿ ಹರಿಯುತ್ತದೆ. ನಾವು ಎಷ್ಟು ಪಡೆಯುತ್ತೇವೆ ಎಂಬುದು ನಮ್ಮ ಸಾಮರ್ಥ್ಯ ಅಥವಾ ನಮ್ಮ ನ್ಯೂನತೆಗಳಿಗೆ ತಕ್ಕಂತೆ ಇರುತ್ತದೆ ಎಂಬುದೇ ಸರಿ. ಬೇಕಾಗಿರುವುದೆಂದರೆ ಸಂಪೂರ್ಣ ಶರಣಾಗತಿ, ಭಕ್ತಿ ಪ್ರಪತ್ತಿಗಳು ಮಾತ್ರವೇ.

**ಭಕ್ತಿಯ ಭಾವದ ಉಗಮ :**

ಋಗ್ವೇದದಲ್ಲಿ ಭಕ್ತಿ ಭಾವದ ಗುರುತುಗಳನ್ನು ಕಾಣಬಹುದಾಗಿದೆ. ಪ್ರಾಚೀನ ಜನರು ದೇವರನ್ನು ವಾತ್ಸಲ್ಯಮಯ ತಂದೆಯಂತೆ, ಪ್ರೀತಿಯ ನಲ್ಲನಂತೆ ಕಂಡರು. ಇಂದ್ರನನ್ನು ಕುರಿತ ಒಂದು ಪ್ರಾರ್ಥನೆ ಹೀಗೆ ಸಾಗುತ್ತದೆ. 'ನಮ್ಮ ರಕ್ಷಕನಾಗಿರು. ನೀನು ನಮ್ಮ ಬಂಧು ಎಂದು ಭಾವಿಸಿ ನಿನ್ನನ್ನು ತಂದೆಯಂತೆ ಕರುಣೆ ತೋರಿಸುವವನೆಂದು, ಸ್ನೇಹಿತನಂತೆ ಭಾವಿಸುತ್ತೇವೆ.' ಮತ್ತೊಂದು ಪ್ರಾಚೀನ ಪ್ರಾರ್ಥನೆ ಹೀಗಿದೆ - ನನ್ನೆಲ್ಲ ಸ್ತುತಿಗಳೂ ಏಕತ್ರವಾಗಿ ಇಂದ್ರನನ್ನು ಕೀರ್ತಿಸುತ್ತವೆ. ಹೆಂಡತಿಯು ಪತಿಯನ್ನು ಆಲಂಗಿಸಿಕೊಳ್ಳುವಂತೆ ದೇವತೆಗಳ ವರದಾತನಾದ ಇಂದ್ರನನ್ನು ನನ್ನ ಎಲ್ಲ ಭಾವನೆಗಳೂ ಆಲಂಗಿಸುತ್ತವೆ. ಧಾರಾಳಿಯಾದ ಇಂದ್ರನನ್ನು ತಮಗೆ ಬೇಕಾದ ಕೊಡುಗೆಗಾಗಿ ಅವು ಪತಿಯನ್ನು ಅಂಟಿಕೊಳ್ಳುವ ಪತ್ನಿಯಂತೆ ಆಶ್ರಯಿಸುತ್ತವೆ - ಈ ಪ್ರಾರ್ಥನೆಗಳಿಂದಾಗಿ ದೇವರನ್ನು ತಂದೆಯಂತೆ ಪತಿಯಂತೆ ಪ್ರಿಯನಂತೆ ಕಲ್ಪಿಸಿಕೊಳ್ಳಲಾಗಿದೆಯೆಂದು ಭಾವಿಸಬಹುದು. ಈ ಹೋಲಿಕೆಗಳು ಭಕ್ತಿಯ ಬಗ್ಗೆ ಗೀತೆಯಲ್ಲಿ ಹೇಳುವ ಮಾತುಗಳ ತಾತ್ಪರ್ಯಕ್ಕೆ ಹತ್ತಿರವಾದವುಗಳಾಗಿವೆ.

ಭಕ್ತಿಯ ಪರಿಕಲ್ಪನೆಯು ಭಗವದ್ಗೀತೆಯಲ್ಲಿ ಅತಿ ಪ್ರಾಚೀನವಾದ ಹಾಗೂ ಅತಿ ಖಚಿತವಾದ ವಿವರಣೆಯನ್ನು ಪಡೆಯಿತು. ಭಗವದ್ಗೀತೆಯು ಉಪನಿಷತ್ಸಾರವೆಂದೇ ಪರಿಗಣಿತವಾಗಿದೆ. ಇದರಿಂದಾಗಿ ಉಪನಿಷತ್ತುಗಳು ಗೀತೆಗಿಂತ ಮೊದಲಿನದ್ದೆಂದೂ, ಭಕ್ತಿಯ ಪರಿಕಲ್ಪನೆಯೂ ಉಪನಿಷತ್ತುಗಳಲ್ಲಿಯೇ ಖಚಿತತೆ ಪಡೆಯಿತೆಂದೂ ತಿಳಿಯಬಹುದು. ಬ್ರಹ್ಮನ ಅಥವಾ ಪರಮಾತ್ಮನ ಆರಾಧನೆಯನ್ನು ಅಥವಾ ಧ್ಯಾನವನ್ನು ಉಪನಿಷತ್ತುಗಳು ನಿಬಂಧಿಸುತ್ತವೆ. ಇಂತಹ ನಿರಂತರ ಧ್ಯಾನವು ವಿಷಯವನ್ನು ಹಿರಿದಾಗಿಸಿ, ಅದಕ್ಕೆ ಒಂದು ಸುಂದರ ರೂಪನ್ನು ಕಟ್ಟಿ ಕೊಡುತ್ತದೆ. ಮಾಂಡೂಕ್ಯ ಉಪನಿಷತ್ ಹೇಳುವುದೆಂದರೆ - ಆತ್ಮಜ್ಞಾನವನ್ನು ಬುದ್ಧಿಯಿಂದ, ಉಪದೇಶದಿಂದ, ಶಿಕ್ಷಣದಿಂದ ಪಡೆಯಲು ಸಾಧ್ಯವಿಲ್ಲ. ಆತನ ಆಯ್ಕೆಯಿಂದಲೇ ಒಬ್ಬನಿಗೆ ಅದು ದೊರೆಯುತ್ತದೆ. ಇಂತಹ ಒಂದು ಆತ್ಮಕ್ಕೆ ಸಾಕ್ಷಾತ್ಕಾರ ಉಂಟಾಗುವುದು. ಭಗವಂತನ ಅನುಗ್ರಹವನ್ನು ಪಡೆಯಲು ಇದೊಂದು ಘನವಾದ ಅವಕಾಶ. ಶ್ವೇತಾಶ್ವತರ ಉಪನಿಷತ್ತು ಭಗವಂತನನ್ನು ಕೇಂದ್ರವಾಗಿ ಹೊಂದಿರುವ ತತ್ವವಿಚಾರದ ಉಪನಿಷತ್‌ಗಳ ಕಾಲದ್ದಾಗಿದೆ. ಈ ಉಪನಿಷತ್ತು ಅವನವನ ಭಾವಕ್ಕೆ ತಕ್ಕಂತೆ ಭಗವಂತ ಕಾಣುವನೆಂದೂ, ಅವನಲ್ಲಿ ಶರಣಾಗತಿ ಮಾಡುವುದರಿಂದ ಕೊನೆಗಾಣಬಹುದೆಂದು ಹೇಳುತ್ತದೆ. ಹೀಗಾಗಿ ಶ್ವೇತಾಶ್ವತರವು ಭಕ್ತಿಪಂಥದ ಹೊಸಿಲಲ್ಲಿನಿಂತು ಭಗವಂತನ ಬಗ್ಗೆಯಾದ ಭಕ್ತಿಯನ್ನು ಬಿತ್ತರಿಸುವುದು. ದೈವ ಲೀಲೆಗಳಲ್ಲಿನ ಆಪ್ಯಾಯತೆ, ಅವನ ಔನ್ನತ್ಯ, ಭವ್ಯತೆ, ಗೂಢತೆ - ಮೊದಲಾದವುಗಳು ಮನುಷ್ಯನ ಮನವನ್ನು ತಟ್ಟಿ ಎಬ್ಬಿಸಿ ಹರಿಯ ಬಗ್ಗೆ ಭಕ್ತಿಯನ್ನು ಪ್ರಕಟವಾಗುವಂತೆ ಮಾಡುತ್ತವೆ. ಈ ಗುಣಗಳಿಂದಾಗಿಯೇ ವೈಷ್ಣವ ಪಂಥದಲ್ಲಿ ಭಕ್ತಿ ಭಾವ ಹರಡುವಂತಾಯಿತು. ಶಿವ - ರುದ್ರ -



ಭಾವನೆಯ ತಳಹದಿಯಲ್ಲಿ ಗೌರವ ಭಯಮಿಶ್ರಿತವಾದದ್ದು - ಇರುವುದೆನ್ನಬೇಕು. ಇಂಡಿಯಾದಲ್ಲಿ ಪ್ರೀತಿಗೆ ಪಾತ್ರನಾದ ದೇವರು ಹರಿ - ನಾರಾಯಣ, ವಾಸುದೇವ ಕೃಷ್ಣನಾದರೆ ಆದರಕ್ಕೆ ಪಾತ್ರನಾದ ದೇವರು ರುದ್ರ - ಶುಭಂಕರ ಶಿವ.

**ಭಕ್ತಿತತ್ವ:**

ಆರ್ತಿಯಾದ ಆತ್ಮದ ಅಗತ್ಯವನ್ನು ಪೂರೈಸಲು ಭಾರತದಲ್ಲಿ ಭಕ್ತಿ ತತ್ವ ಬೆಳೆಯಿತು. ಅತ್ಯಂತ ಹಿರಿದಾದ ಏಕದೇವತಾವಾದ, ಸರ್ವಶಕ್ತ, ಸರ್ವ ಸೃಷ್ಟ ಸರ್ವೋತ್ಕೃಷ್ಟ - ಮೊದಲಾದ ತಾತ್ವಿಕ ಚಿಂತನೆಗಳು ಅತಿ ಎತ್ತರಕ್ಕೆ ಏರಿದರೂ ಸಹ ಒಳಗುದಿಯಲ್ಲಿ ಬಿದ್ದ ಸಾಮಾನ್ಯ ಮಾನವನ ದುಃಖದುಮ್ಮಾನಗಳನ್ನು ಪರಿಹರಿಸಲಾಗದೆ ಆತ್ಮ ಕ್ಷೋಭೆಗೆ, ಮುಲಾಮು ಆಗಿ ಒದಗಿ ಬರದಾಗುತ್ತದೆ. ನಿತ್ಯಸತ್ಯವಾದ, ಖಚಿತವಾದ, ನಿಯಮಬದ್ಧವಾದ ಅನಂತ ಶಕ್ತಿಯು ಜೀವನದ ಜಂಜಡದಲ್ಲಿ ಬಸವಳಿದ ಜೀವಗಳಿಗೆ ಕಣ್ಣೀರನ್ನು ಒರೆಸಲು ಕೈ ಚಾಚದು.

ಒಬ್ಬ ಶ್ರೇಷ್ಠ ಚಿಂತನಕಾರರು ಹೇಳುವಂತೆ "ನಿತ್ಯವಾದದ್ದು (ಉದಾಹರಣೆಗೆ ಹೊಗಳಿಕೆಗೆ ಪ್ರತಿಕ್ರಿಯೆ ತೋರದ ಹಿಮಾಲಯದ ಉತ್ತುಂಗತೆ.) ತನ್ನ ಆರಾಧಕರ ಭಯ ಸಂಕೋಚಗಳಿಗೆ, ಪ್ರೀತಿ ದ್ವೇಷಗಳಿಗೆ ಅತೀತವಾಗಿ ಸಹಾನುಭೂತಿ ರಹಿತವಾಗಿ ಉಳಿದು ಬಿಡುತ್ತದೆ. ಹೀಗಾಗಿ ನಿತ್ಯ ಸತ್ಯವಾದ ಅತ್ಯಂತ ಹಿರಿದಾದ ತತ್ವವೆಂಬುದು ತಪ್ಪು ತಿಳುವಳಿಕೆಯ ಸುಂದರ ಉದಾಹರಣೆ ಯಾಗುತ್ತದೆ."

ಜಗತ್ತು ಕೇವಲ ಹೊರಗೆ ಕಾಣುವುದು ಮಾತ್ರವೇ ಆಗಿದ್ದಲ್ಲಿ, ದೇವರು ತಂಪುರಕ್ತದ ಭಾವಾತೀತ ವಸ್ತು ವಿಷಯವಾಗಿದ್ದಲ್ಲಿ, ದುರ್ಬಲರೂ, ಆದ ಮನುಷ್ಯರು ತಮ್ಮ ನೋವು ದುಮ್ಮಾನಗಳಲ್ಲಿ ದೈವದ ಸಹಾಯ ಹಸ್ತಕ್ಕಾಗಿ ಅಂಗಲಾಚಿ ಬೇಡುವಾಗ ಯಾವುದೇ ರೀತಿಯ ನೆರವೂ ದೊರೆಯದೆ ಕೈಬಿಟ್ಟವರಂತೆ ಆಗುತ್ತಿದ್ದರು. ಎಲ್ಲ ರೀತಿಯ ದೌರ್ಬಲ್ಯಗಳನ್ನೂ ಹೊಂದಿದ ಸಾಧಾರಣ ಮಾನವನು ತನ್ನ ಮತ್ತು ದೇವರ ನಡುವಿನ ಸಂಬಂಧ ಸುಲಲಿತ ವಾಗಿರಲು, ಒಬ್ಬ ಸ್ನೇಹಿತನಂತಹ ದೇವರ ಅಗತ್ಯ ವಿದೆಯೆಂದು ಭಾವಿಸಿದರೆ ತಪ್ಪಾಗಲಾರದು. ಹಾಗಾಗಿಯೇ ಭಕ್ತಿಯ ಪರಿಕಲ್ಪನೆ ತತ್ವ ಉಂಟಾಗಿದ್ದು ದೇವರ ಬಗೆಗಿನ ತತ್ವ ಜ್ಞಾತವಾಗುವುದೇ ಅಲ್ಲದೆ ಒಂದು ಭಾವನಾತ್ಮಕ ಸಂಬಂಧವೂ ಉಂಟಾಗುತ್ತದೆ.

ವೈಷ್ಣವ ಪಂಥದ ಶ್ರೇಷ್ಠ ಆಚಾರ್ಯ ಪುರುಷರಲ್ಲಿ ಒಬ್ಬರಾದ ರಾಮಾನುಜಾ ಚಾರ್ಯರು ಹೇಳುವಂತೆ ದೇವರು ಸರ್ವತಂತ್ರಸ್ವತಂತ್ರನಾಗಿದ್ದಾನೆ. ಮತ್ತು ಜಗತ್ತಿಗೆ ಏಕಮಾತ್ರ ಆಶ್ರಯದ ಉದ್ಧಾರಕರ್ತ. ಎಲ್ಲವೂ ಆತನ ಅಧೀನಕ್ಕೆ ಒಳಗಾದದ್ದು. ಇದಕ್ಕೆ ಕಾರಣವೆಂದರೆ ಜಗತ್ತು ಭ್ರಾಂತಿ ಮಾತ್ರವಲ್ಲದೆ ಅದು ದೇವರೊಡನೆ ಘನೀಭೂತವಾದ ಸಂಬಂಧ ಹೊಂದಿದೆ.

ಆಚಾರ್ಯ ರಾಮಾನುಜರ ನಂಬಿಕೆಯು ವಿಷ್ಣು ಪುರಾಣ ಭಾಗವತ ಪುರಾಣಗಳನ್ನು ಆಧರಿಸಿದ್ದು. ಪುರಾಣಗಳಲ್ಲಿ ದೇವರ ಬಗ್ಗೆ ತಿಳುವಳಿಕೆಯೇ ಅಲ್ಲದೆ ಭಕ್ತಿಗೂ ಒತ್ತು ಹಾಕಲಾಗಿದೆ. ಹಾಗೂ ಮೋಕ್ಷಕ್ಕೆ ಸರ್ವೋತ್ತಮ ಮಾರ್ಗವಾಗಿ ಗುರುತಾಗಿದೆ.

ಭಕ್ತಿಯಿಂದ ಪರ್ವತಗಳನ್ನು ಜರುಗಿಸ ಬಹುದು. ಅದಕ್ಕೆ ಯಾವುದೂ ಅಸಾಧ್ಯವಲ್ಲ. ಎಲ್ಲ ಜೀವಿಗಳಿಗೆ ಒಳಿತನ್ನು ಮಾಡಲು, ಸ್ನೇಹಿತನಂತಿರಲು, ಒಳ್ಳೆಯವನಾಗಿರಲು, ಧರ್ಮದಿಂದಿರಲು, ಧ್ರುವನಿಗೆ ಅವನ ತಾಯಿ ಉಪದೇಶಮಾಡುತ್ತಾಳೆ. ತನ್ನಕುಲ ಧರ್ಮದಿಂದ ಸ್ವಲ್ಪವೂ ತಪ್ಪಿ ನಡೆಯದವನು ವಿಷ್ಣುವಿನ ಭಕ್ತನೆಂದು ತಿಳಿ. ಆತನು ಮಿತ್ರರು ಶತ್ರುಗಳಲ್ಲಿ ಏಕಭಾವ ಹೊಂದಿರುತ್ತಾನೆ. ಆತನು ತನ್ನದಲ್ಲದ್ದನ್ನು ತೆಗೆದುಕೊಳ್ಳಲಾರ. ಯಾರನ್ನೂ ನೋಯಿಸಲಾರ. ಮನಸಿನಲ್ಲಿ ಕೆಟ್ಟ ವಿಚಾರಗಳನ್ನು ಹೊಂದಿರುವುದಿಲ್ಲ. ವಿಷ್ಣುಪುರಾಣ ಹೇಳುವಂತೆ - ಆಸ್ತಿಯಿಂದಾಗಿ ದೊಡ್ಡಸ್ತಿಕೆಯುಂಟಾಗುವಲ್ಲಿ, ಸಂಪತ್ತು ಹಿರಿಮೆಯ ಅಳತೆಗೋಲು ಆದಲ್ಲಿ, ಸ್ತ್ರೀ ಪುರುಷರ ನಡುವೆ ಕಾಮವೇ ಸಂಬಂಧದ ಏಕಮಾತ್ರ ಎಳೆಯಾದಲ್ಲಿ, ಜೀವನದಲ್ಲಿ ವಂಚನೆಯೇ ಸಾಧನೆಯ ಮೂಲವಾದಲ್ಲಿ, ವಿಷಯವೇ ಸಂತಸದ ಏಕಮಾತ್ರ ಸೂತ್ರ ವಾದಲ್ಲಿ, ಬಾಹ್ಯಾಡಂಬರವೇ ಅಂತರಂಗ ಸೌಂದರ್ಯವೆಂಬ ತಿಳಿವುಂಟಾದಲ್ಲಿ, ಅಂತಹ ಸಮಾಜವು ಶೀಘ್ರವಾಗಿ ಕೊಳೆತುಹೋಗುತ್ತಿದೆ ಎಂದರ್ಥ. ಅಂತಹ ಸಂದರ್ಭದಲ್ಲಿ ಒಬ್ಬ ಉದ್ಧಾರಕನ ತುರ್ತು ಅಗತ್ಯ ವುಂಟಾಗುತ್ತದೆ. ಮೋಕ್ಷವೆಂಬುದು ದೇವರೊಡನೆ ಸೇರುವಿಕೆ. (ಈಶ್ವರ ಸಾದೃಶ್ಯ) ರಾಮಾನುಜರ ನಂಬಿಕೆ ವಿಶ್ವಾಸಗಳು ವಿಷ್ಣು ಭಾಗವತ ಪುರಾಣಗಳ ಆಧಾರದಲ್ಲಿ ಉಂಟಾದವು.

**ರಾಮಾನುಜಾಚಾರ್ಯ :**

ಕ್ರಿ.ಶ. 1027 ರಲ್ಲಿ ಶ್ರೀ ಪೆರಂಬುದೂರಿನಲ್ಲಿ ರಾಮಾನುಜರು ಜನ್ಮ ತಳೆದರು. ತಿರುಮಲೆಯ ಆಲಯಕ್ಕೆ ಅನನ್ಯವಾದ ರೀತಿಯಲ್ಲಿ ಸೇವೆಸಲ್ಲಿಸಿ ಇಲ್ಲಿನ ಪೂಜಾಕ್ರಮಗಳನ್ನು ಪುನರ್ವ್ಯ ವಸ್ಥೆ ಗೊಳಿಸಿದರು. ತಮ್ಮ ತಂದೆಯವರನ್ನು ಎಳೆಯ ವಯಸ್ಸಿನಲ್ಲಿಯೇ ಕಳೆದುಕೊಂಡ ರಾಮಾನುಜರು ವೇದಾಂತವನ್ನು ಯಾದವ ಪ್ರಕಾಶರಲ್ಲಿ ಕಲಿತರು. ಆದರೆ ಅವರ ಎಲ್ಲ ರೀತಿಯ ಸಿದ್ಧಾಂತ ವೇದಾಂತವನ್ನು ಒಪ್ಪಲಿಲ್ಲ. ಶ್ರೀರಂಗದಲ್ಲಿ ಮಠಾಧಿಪತಿಗಳಾಗಿದ್ದ ಆಳವಂದಾರ್ - ಯಾಮುನಾಚಾರ್ಯರು ರಾಮಾನುಜರ ತತ್ವದೃಷ್ಟಿ, ಸ್ವತಂತ್ರ ಯೋಚನಾಲಹರಿಯ ಬಗ್ಗೆ ಕೇಳಿ ಮೆಚ್ಚಿಕೊಂಡು ಶ್ರೀರಂಗದಲ್ಲಿ ಇವರನ್ನು ನೆಲೆಗೊಳಿಸುವ ಬಗ್ಗೆ ಯೋಚಿಸಿದರು.

ಚಿಂತಾಗ್ರಸ್ತರಾಗಿ ಒಂದು ದಿನ ಪರಮಾತ್ಮನನ್ನೇ ಈ ಬಗ್ಗೆ ವಿಚಾರಿಸಲು ಅರ್ಚಕರಿಗೆ ಅವರು ಹೇಳಿದರು. ದೈವದ ಅಪೇಕ್ಷೆಯನ್ನು ತಿಳಿಸುವ ಒಂದು ಪದ್ಯ ಈ ರೀತಿ ನಡೆಯುತ್ತದೆ - ನಾನೇ ಪರಮ ಸತ್ಯ. ನಾನು ಶ್ರೀ ವಿಶಿಷ್ಟನಾದವ. ಶರಣಾಗತಿಯೇ ಮೋಕ್ಷಕ್ಕೆ ಖಚಿತವಾದ ಸುಲಭಮಾರ್ಗ. ಪುರುಷಪ್ರಯತ್ನ ಅತಿ ಅಗತ್ಯವಾದದ್ದು ಎಂದೇನಿಲ್ಲ. ಕೊನೆಗೆ ಬಿಡುಗಡೆ ನಿಶ್ಚಯ. ಆಚಾರ್ಯರಲ್ಲಿ ಪೆರಿಯ ನಂಬಿಯೇ ಅತಿಶ್ರೇಷ್ಠ - ದೇವರು ಹೀಗೆ ಹೇಳಿದರು ಅಥವಾ ಇದನ್ನು ಕೇಳಿದ ರಾಮಾನುಜರು ವಿನಯದಿಂದ ಇದರಂತೆ ನಡೆಯಲು ಮೊದಲು ಮಾಡಿದರು.

ನಂತರ ರಾಮಾನುಜರು ಸನ್ಯಾಸ ಸ್ವೀಕರಿಸಿದರು. ಅವರೆಷ್ಟು ಜನಪ್ರಿಯರಾದರು ಎಂದರೆ ಜನ ಅವರನ್ನು ಮುನಿಗಳ ರಾಜ ಎಂದು ಪ್ರೀತಿಯ ಹೆಸರಿಟ್ಟು ಕರೆದರು. ಯತಿರಾಜ ಎಂದು ಅವರಿಗೆ ಹೆಸರಾಯಿತು. ಶ್ರೀರಂಗದಲ್ಲಿ ನೆಲೆಸಿದ ರಾಮಾನುಜರು ತಿರುವಾಯ್ಮೊಳಿಯನ್ನು ಕರಗತ ಮಾಡಿಕೊಂಡರು . ಬೋಧಾಯನ ವೃತ್ತಿಯನ್ನು ಕಂಠಗತವಾಗಿ ಪಡೆದಿದ್ದ ತಮ್ಮ ಶಿಷ್ಯ ಕೂರತ್ತಾಳ್ವಾನ್‌ರ ನೆರವು ಹೊಂದಿದ ರಾಮಾನುಜರು ವೇದಾಂತದೀಪ, ವೇದಾಂತ ಸಂಗ್ರಹ ವೇದಾಂತಸಾರವನ್ನು ಬರೆದರು. ಜೊತೆಗೇ ಬ್ರಹ್ಮಸೂತ್ರ ಭಗವದ್ಗೀತೆಗಳಿಗೆ ಭಾಷ್ಯಗಳನ್ನೂ ಬರೆದರು. ವೈಷ್ಣವರಲ್ಲಿ ಹಿರಿಯರೆಲ್ಲ ಈ ಭಾಷ್ಯಗಳನ್ನು ಒಪ್ಪಿದರು. ಬ್ರಹ್ಮಸೂತ್ರಗಳ ಭಾಷ್ಯವನ್ನು ಶ್ರೀ ಭಾಷ್ಯವೆಂದೂ ರಾಮಾನುಜರನ್ನು ಶ್ರೀ ಭಾಷ್ಯಕಾರರೆಂದೂ ಕರೆದರು. ರಾಮಾನುಜರು ದಕ್ಷಿಣಭಾರತವನ್ನೆಲ್ಲ ಸುತ್ತಿ ಹಲವಾರು ವೈಷ್ಣವ ಆಲಯಗಳ ಪುನರುದ್ಧಾರಮಾಡಿ ವೈಷ್ಣವ ಪಂಥವನ್ನು ಹರಡಿದರು.

ರಾಮಾನುಜರು ತಮ್ಮ ಜೀವಿತಾವಧಿ ಯನ್ನು ಸಂತ ಮುನಿಗಳ ಸಂಗದಲ್ಲಿ ಕಳೆದವರು. ಅವರೆಲ್ಲ ಧಾರ್ಮಿಕವಾದ ಒಂದು ವಾತಾವರಣ ನಿರ್ಮಾಣ ಮಾಡುವುದರಲ್ಲಿ ಯಶಸ್ವಿ ಯಾಗಿದ್ದರು. ಆಳ್ವಾರುಗಳ ಪಾಶುರಗಳು ನಾಡಿನ ಉದ್ದಗಲಕ್ಕೆ ಹರಡಿದ್ದಿತು. ಆಳ್ವಾರರುಗಳಿಗೆ ದೇವರು ಬರೇ ಸೃಷ್ಟಿಕರ್ತನಾಗದೆ ಸನ್ನಿಹಿತನಾದ ಸ್ನೇಹಿತನೂ ಆಗಿದ್ದ. ಹೀಗಾಗಿ ದೇವರನ್ನು ಒಬ್ಬ ವ್ಯಕ್ತಿಯಂತೆ ತಾತ್ವಿಕವಾಗಿ ನೋಡುವ ಒಂದು ಭಾವವನ್ನು ರಾಮಾನುಜರು ಬೆಳೆಸಿದರು.

ರಾಧಾಕೃಷ್ಣನ್ ರಾಮಾನುಜರ ಬಗ್ಗೆ ಹೀಗೆನ್ನುತ್ತಾರೆ - ''ರಾಮಾನುಜರು ಧಾರ್ಮಿಕ ಸ್ಫೂರ್ತಿಯನ್ನು ಬಲವಾಗಿ ನಂಬಿದ್ದರು. ಅದರಿಂದಾಗಿ ದೇವರು ಸೃಷ್ಟಿಯ ಮೂಲಕವಾಗಿ, ತಾತ್ವಿಕತೆಯಿಂದ, ದೇವದೂತರಿಂದ ತನ್ನ ಅವತಾರಗಳ ಮೂಲಕವಾಗಿ ಮನುಷ್ಯನಿಗೆ ದರ್ಶನ ನೀಡುವನೆಂಬ ಆಳವಾದ ಧಾರ್ಮಿಕ ದೃಷ್ಟಿಯನ್ನು ಹರಡಿದರು. ಬ್ರಹ್ಮಸೂತ್ರ ಹಾಗೂ ಉಪನಿಷತ್ತುಗಳಲ್ಲಿ ಅಂತರ್ಗತವಾಗಿ ಗೂಢವಾಗಿದ್ದ ವಿಷಯಗಳನ್ನು ಆತ ತನ್ನ ಆಚಾರ್ಯರುಗಳ ನೆರವಿನಿಂದ ಆಳ್ವಾರರುಗಳ ಪಾಶುರಗಳ ಅಧ್ಯಯನದಿಂದ ಬಹಿರ್ಗತ ಗೊಳಿಸಿದರು. ಒಂದು ಕ್ಷಣವೂ ಕೂಡ ತಾವೊಂದು ಹೊಸ ಪಂಥವನ್ನು ಹುಟ್ಟು ಹಾಕುತ್ತಿದ್ದೇವೆ ಎಂದು ಭಾವಿಸಲಿಲ್ಲ. ಆತ ಸರ್ವಕಾಲಕ ಆಗಿದ್ದ ಬೌದ್ಧಿಕ ಸತ್ಯವನ್ನು ಸಾರಿ ಹೇಳಿದರಷ್ಟೆ''.

ಆತ ತಿರುಮಲೆಯಲ್ಲಿ ಪ್ರವೇಶಗೊಳಿಸಿದ ಎಲ್ಲ ಪುನರ್ನವೀಕರಣಗಳೂ ಪರಿಷ್ಕರಣಗಳೂ ಮೇಲೆ ಹೇಳಿರುವ ಭಕ್ತಿಯ ಪರಿಕಲ್ಪನೆಯ ಆಧಾರದಲ್ಲಿ ಆದವು.

**ರಾಮಾನುಜರ ನಂತರದ ಆಚಾರ್ಯರು :**

ರಾಮಾನುಜರ ವಿಶಿಷ್ಟಾದ್ವೈತ ತತ್ವವು ರಾಮಾನಂದರನ್ನು (1300 ರಿಂದ 1411) ಕಬೀರ (1398 ರಿಂದ 1527) ನಾನಕ ಹಾಗೂ ತುಲಸೀದಾಸ (1511 ರಿಂದ 1637) ರನ್ನು ಪ್ರಭಾವಿಸಿತು. ಮತ್ತಿತರ ಹಲವು ಹನ್ನೊಂದು ಮಂದಿ ಈ ಪಂಥವನ್ನು ಆದರಿಸಿ ಭಾರತಾದ್ಯಂತ ಹರಡಿದರು.

ಇಂತಹದೇ ಒಂದು ಕೃತಿ ಜಯದೇವನ ಗೀತಗೋವಿಂದ. ಈ ಪ್ರಚಾರಾಂದೋಲನ ದಲ್ಲಿಯೇ ಸಂತಜ್ಞಾನೇಶ್ವರ ನಾಮದೇವ (ಮಹಾರಾಷ್ಟ್ರ) ನರಸೀ ಮೆಹೆತಾ (ಗುಜರಾತ್) ಚಂಡಿದಾಸ, ವಿದ್ಯಾಪತಿ, ಸೂರದಾಸ, ಚೈತನ್ಯ, ವಲ್ಲಭಾಚಾರ್ಯ, ಪೋತನ, ಅನ್ನಮಾಚಾರ್ಯ ಮೊದಲಾದವರೆಲ್ಲರೂ ಬಂದರು.

ಪ್ರಬಂಧಕಾರರುಗಳಾದ ಆಳ್ವಾರರು ರಾಮಾನುಜರು ಮತ್ತಿತರ ಶ್ರೀವೈಷ್ಣವ ಸಂತರುಗಳೆಲ್ಲ ತಿರುಮಲೆಯ ದೇವರಲ್ಲಿ ಭಕ್ತಿ ಮಾಡಿದವರೇ. ಹೀಗಾಗಿ ತಿರುಮಲೆಯ ದೇವರು ಈಗಲೂ ಭವಿಷ್ಯದಲ್ಲಿಯೂ ದಾರಿದೀಪವಾಗಿ ಮನುಜ ಪಥದಲ್ಲಿ ಬೆಳಕು ಚೆಲ್ಲಿದ್ದಾನೆ. ಚೆಲ್ಲುತ್ತಾನೆ.

## ಮನೋಹರ ಮೂರ್ತಿ

**ದೇವರ ಬಿಂಬ :**

ಭಕ್ತರಿಗೆ ಸ್ವಾಮಿಯ ಕಟ್ಯವಲಂಬಿತ ಹಸ್ತದ ವಿಗ್ರಹವು ದೇವರ ಜೀವಂತ ಮೂರ್ತಿಯಾಗಿದೆ. ದುಃಖ ದುಮ್ಮಾನಗಳಲ್ಲಿ ಮುಳುಗಿದ ಜನಕ್ಕೆ ಕಾಲದಿಂದಲೂ ಉತ್ತಾರಕ ಶಕ್ತಿಯಾಗಿ ಕೆಲಸ ಮಾಡುತ್ತ ಬಂದಿದೆ. ದುಃಖಿತರಾದ ಜನತೆ ಎಲ್ಲ ಮೂಲೆಗಳಿಂದಲೂ ಬಂದು ಸ್ವಾಮಿಯನ್ನು ದರ್ಶಿಸಿ ಸಮಾಧಾನ ಹೊಂದುವರು.

ಸ್ವಾಮಿಯ ವಿಗ್ರಹವು ಸ್ಥಾನಕ ಎಂದರೆ ನಿಂತಿರುವ ಭಂಗಿಯಲ್ಲಿದೆ. ಆರಾಧನೆಗೆ ಬಂದು ಮುಂದೆ ನಿಂತವರನ್ನೆಲ್ಲ ಸಮಾನವಾಗಿ ನೋಡುವ ಸಮದೃಷ್ಟಿಯಿದೆ. ಮುಖವು ಸಂತಸವನ್ನು ಸೂಸುತ್ತ ಮುಗುಳ್ನಗೆಯನ್ನು ಹೊಂದಿದೆ. ಅಲೆಯಲೆಯಾಗಿರುವ ಕುರುಳೋಳಿಯು ಭುಜಗಳವರೆಗೆ ಇಳಿದುಬಂದಿದೆ. ಕಿವಿಗಳಲ್ಲಿ ಸುಂದರವಾದ ಓಲೆಗಳಿವೆ. ಕೊರಳು ಶಂಖದಂತೆ ಸುಂದರವಾಗಿದ್ದು ಸ್ವಾಮಿಯ ದೇಹವು ಸಿಂಹದಂತೆ ಗಂಭೀರವೂ, ಭವ್ಯವೂ ಆಗಿ ಕಂಡುಬರುತ್ತದೆ. ನಾಲ್ಕು ಕೈಗಳಿವೆ. ಮೇಲಿನೆರಡು ಕೈಗಳಲ್ಲಿ ಚಕ್ರ ಶಂಖಗಳಿವೆ. ಕೆಳಗಿನ ಬಲಗೈ ವರದ ಹಸ್ತವಾಗಿದೆ. ಕೆಳಗಿನ ಎಡಗೈ ಕಟ್ಯವಲಂಬಿತ ಹಸ್ತವಾಗಿದೆ. ಇಡೀ ದೇಹವೇ ತ್ರಿಭಂಗಿಯಲ್ಲಿ ಇಲ್ಲದೆ ಇದ್ದರೂ ನಡುವಿನ ಕೆಳಭಾಗವು ಸ್ವಲ್ಪ ಎಡಭಾಗಕ್ಕೆ ವಾಲಿದಂತಿದೆ. ಮೊಣಕಾಲುಗಳು ಸ್ವಲ್ಪ ಮಡಚಿದಂತೆ ಹೊರಕ್ಕೆ ತೆರೆದುಕೊಳ್ಳುವಂತಿದ್ದು ವಿಶಿಷ್ಟವಾದ ಶೋಭೆ ಯನ್ನು ತಂದಿದೆ. ಎದೆಯ ಬಲಗಡೆಯಲ್ಲಿ ಲಕ್ಷ್ಮಿಯು ಕುಳಿತಿರುವಂತಿದೆ. ದೇವರ ವಿಗ್ರಹ ಸೊಂಟದಿಂದ ಕೆಳಕ್ಕೆ ಪಂಚೆಯನ್ನು ಉಟ್ಟಂತಿದೆ. ಸೊಂಟದಲ್ಲಿ ಒಂದು ಕಟಿಬಂಧವಿದೆ. ಕಾಲುಗಳು ಪಾದಗಳು ಸುಂದರವಾಗಿ ಮೂಡಿಬಂದು ಪರಿಪೂರ್ಣತೆಯ ಸಂಕೇತ ಗಳಾಗಿವೆ. ಇಲ್ಲಿನ ವಿಗ್ರಹವು ಯಾವುದೇ ಆಗಮ ಶಾಸ್ತ್ರದ ನಿಯಮಗಳಿಗೂ ಅನುಸಾರವಾಗಿಲ್ಲವೆಂಬುದು ಬಹುಮುಖ್ಯವಾಗುತ್ತದೆ - ಕಾರಣ ದೇವರು ಆಗಮಶಾಸ್ತ್ರಗಳಿಗೆ ಅತೀತನಾದವನು.

**ಸ್ವಾಮಿದರ್ಶನ :**

ಬಹುಮಂದಿ ಭಕ್ತರಿಗೆ ಸ್ವಾಮಿದರ್ಶನವೇ ಒಂದು ಆಧ್ಯಾತ್ಮಿಕ ಸಾಧನೆ. ದರ್ಶನದ ಬಗ್ಗೆ ಹೆಚ್ಚು ಚಿಂತನೆ ಮಾಡಿದಂತೆಲ್ಲ ಅದರ ಅರ್ಥವನ್ನು ವಿವರಿಸುವುದು ಕಷ್ಟವಾಗುತ್ತದೆ. ಮಹಾಭಾರತ ಹೇಳುವುದು - ಪವಿತ್ರ ತೀರ್ಥಗಳಲ್ಲಿ ಸ್ನಾನ

ಮಾಡುವುದು, ಮೃಣ್ಮೂರ್ತಿ, ಶಿಲಾವಿಗ್ರಹ ಗಳಿರುವ ಆಲಯಗಳಿಗೆ ಯಾತ್ರೆ ಹೊರಡುವುದು - ಇವುಗಳಿಂದ ಕಡೆಯಲ್ಲಿ ಮನುಷ್ಯ ಪ್ರಕ್ಷಾಳಿತನಾಗಬಹುದು. ಆದರೆ ಮಹಾತ್ಮಸಂತರ ದರ್ಶನ ಮಾತ್ರದಿಂದಲೇ ಶುದ್ಧರಾಗಬಹುದು. ಎಂದಾಗ ದರ್ಶನವೆಂದರೆ ದೇವರ ವಿಗ್ರಹವನ್ನು ನೋಡುವ ಮಾತ್ರದ ಒಂದು ಕೆಲಸವೇ ಅಥವಾ ಅದರಲ್ಲಿ ವ್ಯಕ್ತಿ ನಿಷ್ಠವಾದ ಬೇರಾವುದಾದರೂ ಅಂತರ್ಗಾಮಿಯಾದ ಆಧ್ಯಾತ್ಮಿಕ ಶಕ್ತಿಯಿದೆಯೇ ಎಂಬುದು ಪ್ರಶ್ನೆಯಾಗುತ್ತದೆ. ಈ ಬಗ್ಗೆ ಹೆಚ್ಚಿಗೆ ಯೋಚಿಸಿದಂತೆಲ್ಲ ದರ್ಶನವೆಂಬುದು ಕೇವಲ ಅನುಗ್ರಹ ಆಶೀರ್ವಾದ ಎಂಬಷ್ಟಕ್ಕೆ ನಿಲ್ಲುವುದಿಲ್ಲ ಎಂಬುದು ಭಾಸವಾಗುತ್ತದೆ. ದರ್ಶನವೆಂಬುದು ಪಡೆಯುವುದೂ ಅಲ್ಲ, ಕೊಡುವುದೂ ಅಲ್ಲ. ಅದು ಆಗುವುದು. ಘಟಿಸುವುದು. ಉದಾಹರಣೆಗೆ ವರ್ಷಾಂತರಗಳಿಂದ ಅದರ ಕೀರ್ತಿಯನ್ನೂ ವಿವರವನ್ನೂ ಕೇಳಿದ ನಂತರ ಮೊದಲಬಾರಿಗೆ ಗಂಗೆಯನ್ನು ಕಾಣುವ ಮನುಷ್ಯ ದರ್ಶನವನ್ನು ಅನುಭವಿಸುತ್ತಾನೆ.

ದರ್ಶನ ಎಂಬುದು ಆಧ್ಯಾತ್ಮಿಕ ಅನುಭವ. ಅದಕ್ಕೆ ಒಂದು ಪರಿಭಾಷೆಯಿಲ್ಲ. ಶತಮಾನಗಳ ಪರಂಪರೆಯ ಹಿನ್ನೆಲೆಯ ನಾವು ಅದನ್ನು ಯೋಚಿಸದೆಯೇ ಸ್ವೀಕರಿಸುತ್ತೇವೆ. ನಮ್ಮ ಸಂಸ್ಕೃತಿಯಿಂದಾಗಿ ಅಥವಾ ಒಂದು ಸ್ಫೂರ್ತಿ ಶಕ್ತಿಯಿಂದಾಗಿ ನಮ್ಮ ಜನರ ಪ್ರಜ್ಞಾಪಾತಳಿಯಲ್ಲಿ ಶಾಶ್ವತವಾಗಿ ನಿಂತು ಯಾವುದೇ ರೀತಿಯ ಸಂಕೋಚ ಭಯಗಳಿಲ್ಲದೆಯೇ ಹೊಸ ಹೊಸ ವಿಧಾನವನ್ನು ಪಡೆಯುತ್ತದೆ. ಪಾಶ್ಚಾತ್ಯ ಚಿಂತನೆ, ಸಂಪ್ರದಾಯ ಇದ್ದರೂ ಸಹ ಸೂಜಿಗಲ್ಲಿನ ಸೆಳೆತ ಹೊಂದಿದ ಕಬ್ಬಿಣದಂತೆ ದರ್ಶನದತ್ತ ಆಕರ್ಷಿತನಾಗುವಲ್ಲಿ ಈ ಅಂಶ ಸ್ಪಷ್ಟವಾಗುತ್ತದೆ. ಇಡೀ ಹಿಂದೂ ಶಿಕ್ಷಣ, ಧರ್ಮ, ತತ್ವಗಳು ಉಸಿರಾಡಿದಂತೆ ಸಹಜವಾಗಿ ನಮಗೆ ವಾರಸಿಕೆಯಾಗಿ ದಕ್ಕಿದೆ ಎಂಬುವುದಕ್ಕೆ ಇದೂ ಒಂದು ಸರಳ ಸುಲಭ ಉದಾಹರಣೆ.

**ಒಬ್ಬ ಖ್ಯಾತ ಲೇಖಕರೆಂದಂತೆ ಒಂದು ಮಹಾನ್ ವ್ಯಕ್ತಿ ವಿಷಯದ ಸನ್ನಿಧಿಯಲ್ಲಿ ಒಂದು ಸುಮೂಹ ಬುದ್ಧಿಯು ಅನುಭವಿಸುವ ಆನಂದದ ಅನುಭಾವವನ್ನು ದರ್ಶನವೆಂದು ಹೇಳಬಹುದು.** ವ್ಯಕ್ತಿಯನ್ನು ಮೀರಿ ನಿಲ್ಲುವ ಆನಂದವನ್ನುಂಟುಮಾಡುವಂತಹ ಗುರುತನ್ನು ಹೊಂದಿದ ವ್ಯಕ್ತಿ ಮತ್ತು ವಿಷಯ ಯಾವುದಾದರೂ ಆಗಬಹುದು. ಹಿಂದಿನ ಇತಿಹಾಸ ವಾಗಬಹುದು. ಇಂದಿನ ಸಮಾಜ ಆಗಬಹುದು. ಮುಂದಿನ ಭವಿಷ್ಯವೂ ಆಗಿರಬಹುದು. ಈ ಆನಂದವನ್ನು ಅನುಭವಿಸಿದವನು ಮತ್ತೆ ಮತ್ತೆ ಅದಕ್ಕೆ ಹಿಂದಿರುಗುತ್ತಾನೆ. ಇಲ್ಲಿ ಯಾವುದೇ ಮಾತಿಗೂ ಅವಕಾಶವಿಲ್ಲ. ಕಾಣಿಕೆ ನೀಡುವುದು ಪ್ರಸಾದ ಪಡೆಯುವುದು ಯಾವುದೂ ಬೇಕಿಲ್ಲ. ಇಲ್ಲಿ **ಒಂದು ನಿತ್ಯವಾದದ್ದರಲ್ಲಿ ಸ್ವಂತದ ಅಹಂಕಾರವನ್ನು ಅರ್ಪಿಸಿ ಅಗಾಧವಾದ ಆನಂದವನ್ನು ಅನುಭವಿಸುವುದು ಮಾತ್ರವಿದೆ.** ಮಹಾ ಸತ್ವದ ಮುಂದೆ ನಿಂತಾಗ ಅಹಂಕಾರ ಶೂನ್ಯವಾಗಿ ಆನಂದವೂ ಅನುಭಾವವಾಗುತ್ತದೆ. (ಒಂದು ರೀತಿಯಲ್ಲಿ ಇದನ್ನೇ ಸಮಾಧಿ ಸ್ಥಿತಿಯೆನ್ನಬಹುದೇನೋ.)

ದರ್ಶನ ಎಂಬುದು ಮೇಲೆ ಹೇಳಿರುವಂತಹದ್ದೇ. ಆದರೆ ಅದಕ್ಕೆ ಯಾರದಾದರೂ ಸ್ಪರ್ಶ, ಉಪಸ್ಥಿತಿ ಬೇಕೇ ಎಂದರೆ ಉತ್ತರ ಇಲ್ಲ ಎಂದಾಗುತ್ತದೆ. ಆಧ್ಯಾತ್ಮಿಕ ಅನುಭಾವವು ಕಾಲದೇಶಗಳನ್ನು ಮೀರಿ ನಿಲ್ಲುತ್ತದೆ. ಆದರೆ ಎಲ್ಲವನ್ನೂ ಕೊಡುವವನ ಅವನ ಲೀಲೆಗಳಲ್ಲಿ ಒಂದು ಎಂದರೆ ನಮಗೆ ಅಹಂಕಾರವಿರುವುದು. ಇದರಿಂದಲೇ ಇರುವಿಕೆ ಸಿದ್ಧವಾಗುವುದು. ಈ ಅಹಂ ಇರುವವರೆಗೆ ಮನುಷ್ಯ ಇದನ್ನು ಹೋಗಲಾಡಿಸಲು ಒಂದು ಹೊರಗಣ ಶಕ್ತಿಯನ್ನು ಬಯಸುವುದು ಸಹಜ. ಈ ಒಂದು ಅಹಂ ಶೂನ್ಯತೆಯ ಆನಂದಕ್ಕಾಗಿ ಅವನ ನೆರವು ದರ್ಶನದ ನೆರವು ಅಗತ್ಯ.

ನಾವು ಎಷ್ಟು ಮೂರ್ಖರಾಗಿದ್ದೇವೆ ಎಂದರೆ ನಮ್ಮ ಅಹಂಕಾರದ ಚಿಂತನೆಗಳ ಹೊರತಾಗಿ ನಮ್ಮ ಅಪೂರ್ಣತೆಗಳನ್ನು ನೀಗಿ ಅವನ ಕರುಣೆಯನ್ನು ನಿತ್ಯವೂ ಅನುಭವಿಸಲು ತಕ್ಕ ವ್ಯವಧಾನವನ್ನೂ ಹೊಂದಿಲ್ಲ. ಅವನ ದರ್ಶನ ಆದ ಮೇಲೆ ಮನುಷ್ಯ ಪರಿವರ್ತಿತನಾಗುತ್ತಾನೆ. ದೇವರು ಹಲವರಿಗೆ ಮಾತ್ರವೇ ಇಂತಹ ಮುಗ್ಧ ಮನವನ್ನು ಕೊಟ್ಟಿದ್ದಾನಲ್ಲ ಎಂಬ ಅಸೂಯೆಯೂ ಹಲವರನ್ನು ಕಂಡಾಗ ಜ್ಞಾನಿಗಳೆಂಬುವರಿಗೆ ಉಂಟಾಗಬಹುದು. ಮುಗ್ಧ ಜನರಿಗೆ ಮನಸ್ಸಿನ ತೊಂದರೆಗಳು ಜೀವನದಲ್ಲಿ ಕಾಡುವುದಿಲ್ಲ. ಅವರಿಗೆ ಭಕ್ತಿ ಉಂಟು, ದೇವರು ಉಂಟು, ಸತ್ಯ ಉಂಟು. ಅಲ್ಲಿಗೆ ಮುಗಿಯಿತು. ಇತರರಿಗೆ ಆತ್ಮದ ಅಂಧಕಾರದ ಬಗ್ಗೆ ಮಾನಸಿಕ ಯಾತ್ರೆಗಳು, ಜೀವನವೆಂಬುದು ವಿವಿಧ ಘರ್ಷಣೆಗಳ ಅರಣ್ಯ. ದೇವರು ನೆರಳಿನಂತೆ ಹಿನ್ನೆಲೆಗೆ ಸರಿಯುವಂತೆ ಕಂಡುಬಂದರೆ ಆಶ್ಚರ್ಯವಿಲ್ಲ. ಜನನ ಮರಣಗಳ ನಡುವೆ ಯಾವ ಕೆಲಸಕ್ಕೂ ಬಾರದ ನಿರರ್ಥಕ ಯಾತ್ರೆಯಂತೆ ಜೀವನ ಕಂಡು ಬರುವುದುಂಟು. ಎಲ್ಲ ಪ್ರಶ್ನೆಗಳೂ ಎದ್ದದ್ದು ಮುಳುಗಬೇಕಾದ ಮೂಲವಸ್ತುವಿನ ಬಗ್ಗೆಯೇ ಸಂದೇಹ ಸಮ್ಮೋಹಗಳು. **ದಶಕಗಳ ಹಿಂದೆ ನಾನು ಮೊದಲ ಬಾರಿಗೆ ತಿರುಮಲೆಯ ಬೆಟ್ಟದಲ್ಲಿ ಕಂಡಾಗ ಗೌರವ ಭಕ್ತಿಗಳಿಂದಾಗಿ ನನ್ನ ಅಂತರಂಗದ ಅಂಧಕಾರ ಅವನ ಅಪಾರವಾದ ದಯೆಯ ಬೆಳಕಿನಿಂದಾಗಿ ತೊಲಗಿತು. ಪೂರ್ಣ ಶರಣಾಗತಿಯ ಆ ಒಂದು ಕ್ಷಣದಿಂದ ಆತ ನನ್ನ ಜೊತೆಗೇ ಇದ್ದಾನೆ. ಇಹಜೀವನದ ಬದುಕನ್ನು ಸಾಗಿಸಲು ನನಗೆ ಬಲಕೊಡುವ ಬೇರೆ ಯಾವ ಬಲಮೂಲವೂ ನನಗೆ ಇಲ್ಲ. ಆತನ ನಿತ್ಯ ಉಪಸ್ಥಿತಿಯಿದ್ದರೂ ಆತನ ಭೌತಿಕ ವಿಗ್ರಹದ ದರ್ಶನಕ್ಕೆ ತನ್ನದೇ ಆದ ಪ್ರಭಾವವುಂಟು. ಇದರಿಂದಾಗಿ ಪ್ರತಿಬಾರಿಯೂ ಹಿಂದಿಲ್ಲದಂತಹ ಒಂದು ಎತ್ತರಕ್ಕೇರುವಿಕೆ ಆನಂದದ ಹೊಸ ಮಜಲು ಮುಟ್ಟುವಿಕೆಗಳುಂಟಾಗುತ್ತದೆ. ಇದಕ್ಕೆ ನೀಡಲು ಯಾವ ಕಾರಣವೂ ಕಂಡುಬರುವುದಿಲ್ಲ.** (ಡಾ|| ಎನ್. ರಮೇಶನ್ ಅವರು ತಮ್ಮ ಅನುಭಾವವನ್ನು ಆರ್ದ್ರವಾಗಿ ಇಲ್ಲಿ ವಿವರಿಸಿರುವುದನ್ನು ಕಾಣಬಹುದಾಗಿದೆ -ಅನುವಾದಕ.)

**ವೆಂಕಟೇಶ್ವರಸ್ವಾಮಿ -**

**ಪವಾಡ - ಮಾರ್ಗದರ್ಶನ :**

ಹಲವಾರು ಭಕ್ತರು ತಮ್ಮ ಅನುಭವಗಳನ್ನು ಕುರಿತು ಹೇಳುವಾಗ ಆತನ ಅತಿಮಾನುಷಸತ್ವ ಗೈಯುವ ಭರದಲ್ಲಿ ಉತ್ಪ್ರೇಕ್ಷೆಯ ಮಾತುಗಳನ್ನಾಡಬಹುದಾದರೂ ಪವಾಡ ಸದೃಶ ಘಟನೆಗಳು ನಡೆದಿಲ್ಲವೆನ್ನುವಂತಿಲ್ಲ.

ಸ್ವಾಮಿಯನ್ನು ತಿಳಿಯುವ ನಿಜವಾದ ಪ್ರಯತ್ನ ಪಡುವವರಿಗೆ ಇಂತಹ ಸಂಘಟನೆಗಳು ಅರ್ಥವಿಲ್ಲದಂತಹವು. ಒಂದು ದೀರ್ಘ ರೋಗ ವಾಸಿಯಾಯಿತು. ಮಕ್ಕಳಿಲ್ಲದವರಿಗೆ ಸಂತಾನ ಪ್ರಾಪ್ತಿಯಾಯಿತು. ಸಮಯೋಚಿತ ಅಪಾಯದ ಸೂಚನೆಯಾಗಿ ಘೋರ ದುರಂತವಾಗುವುದು ತಪ್ಪಿತು, ಮತ್ತು ಇಂತಹವೇ ಪವಾಡಗಳ ಐತಿಹ್ಯಗಳು, ಬಹುಸಂಖ್ಯೆಯವಾದರೂ, ಇವೆಲ್ಲ ಪ್ರಧಾನವಾಲಾರವು. ಆತನ ಬಗ್ಗೆ ನಂಬಿಕೆ ವಿಶ್ವಾಸಗಳಿರುವ ಯಾರೇ ಆದರೂ **ಆತನ ದರ್ಶನದ ನಂತರ ತಮ್ಮ ಜೀವನದಲ್ಲಿ ಹೊಂದುವ ಅನಿರ್ವಚನೀಯ ಸೂಕ್ಷ್ಮವಾದ ಪರಿವರ್ತನೆ ಅತ್ಯಂತ ಹಿರಿಯ ಪವಾಡ ಎನ್ನಬೇಕು.** ಆತನ ಬಳಿಗೆ ನಿಜವಾದ ತುರ್ತು ಇದ್ದು ಹೋಗುವ ಮನುಷ್ಯರು ತಮ್ಮ ಭಕ್ತಿ ಶರಣಾಗತಿಗಳಿಂದಾಗಿ ಆತ್ಮಬೋಧೆಯನ್ನು ಪಡೆದಂತೆ ಹದುಳವೂ ಹಗುರುವೂ ಆದ ಸಮಾಧಾನದ ನೆಲೆಯನ್ನು ಮುಟ್ಟುವಂತಾಗಿ ಒಂದು ಭವ್ಯವಾದ ತೃಪ್ತಿಯ ಭಾವವುಂಟಾಗುತ್ತದೆ ಎಂಬುದನ್ನು ಕಾಣಬಹುದು, ಅನುಭವಿಸ ಬಹುದು.

ಆತನ ಬಳಿ ಮೌನವಾಗಿ ಕುಳಿತಿರುವುದರಿಂದ, ನಿಂತಿರುವುದರಿಂದ ಜನಕ್ಕೆ ಒಂದು ವಿಧದ ಅತಿಹೆಚ್ಚಿನ ಲಾಭವನ್ನು ಪಡೆಯುವಂತಾಗುತ್ತದೆ. ಇದನ್ನು ಸರಿಯಾದ ರೀತಿಯಲ್ಲಿ ಮಾಡಿದ್ದೇ ಆದರೆ ಮಾನವನ ಮನದ ತುಮುಲಗಳು ಶಾಂತವಾಗಿ, ಆತ್ಮೋದ್ಧಾರವಾಗುತ್ತದೆ. ಮನದ ಆಂದೋಲನದ ಅಲೆಗಳು ಹಿಂದೆ ಸರಿದು ಶಾಂತಿ ಆವರಿಸುವುದನ್ನು - ಯಥಾಪ್ರಕಾರ ಸರೋವರದಲ್ಲಿ ಸಣ್ಣ ಅಲೆಗಳೆದ್ದು ಬರುವುದನ್ನು - ಮನುಷ್ಯ ಅನುಭವಿಸಬಹುದಾಗಿದೆ. ಕ್ರಮೇಣ ಸೂರ್ಯನ ಮುಂದೆ ಹಿಮದ ರಾಶಿಕರಗುವಂತೆ ಎಲ್ಲ ತಾಪತ್ರಯಗಳೂ, ಕಷ್ಟಕಾರ್ಪಣ್ಯಗಳೂ ಕರಗಿ ಹೋಗುವ ಅನುಭವ ಆಗುತ್ತದೆ. ಸಣ್ಣಸಣ್ಣ ಕಿರಿಕಿರಿಯ ವಿಚಾರಗಳಿಗೆಲ್ಲ ಮನದಲ್ಲಿ ತಾವು ಕೊಟ್ಟ ತಮ್ಮ ಸಣ್ಣತನದ ಬಗ್ಗೆ ಪಶ್ಚಾತ್ತಾಪ ಉಂಟಾಗುತ್ತದೆ. ತನ್ನ ಒಳಗೇ ಪರಮಾತ್ಮನನ್ನು ಕಂಡ ಪರಮಾನಂದದಲ್ಲಿ ಅಹಂಕಾರ ಸಂಪೂರ್ಣ ನಾಶವಾಗಿ; ಸಂತಸವುಕ್ಕಿ ದಿವ್ಯಜ್ಞಾನದ ಪರಾಕಾಷ್ಠೆಯನ್ನು ಸೇರಿದಂತಾಗುತ್ತದೆ. ಯಾವುದೇ ಕೆಲಸವನ್ನೂ ಮಾಡದೆ ಈ ಒಂದು ಸುಖಸಾಗರದಲ್ಲಿ ಮುಳುಗಿ, ಆ ಮೂಲಕವಾಗಿ (ಅನಿಕೇತನರಾಗಿ - ಮನೆಯಿಲ್ಲದವರಾಗಿ) ಈ ಒಂದು ವಿಶಾಲ ಸಾಗರದ ಮುಂದೆ ಮಾತನಾಡದೆ ನಿಂತಲ್ಲಿ ಆಧ್ಯಾತ್ಮಿಕ ಆನಂದ, ಮೋಕ್ಷಭಾವ ಉಂಟಾಗದಿರದು. ಆದರೆ ವ್ಯಕ್ತಿಯು ಈ ಸಮಾಧಿ ಸ್ಥಿತಿಯಿಂದ ಹೊರಕ್ಕೆ ಪುನಃ ಬಂದು ಜಗತ್ತಿನ ಜಂಜಡಗಳಲ್ಲಿ ಒಂದಾಗಿ ಲೋಕದ ಕೊನೆಯಿಲ್ಲದ ಕಲಹಗಳಲ್ಲಿ ಕಾಲುಕೆರೆಯುತ್ತ ಹಲವು ಪ್ರತಿಭಟನೆಯಲ್ಲಿ ಪಾಲುಗೊಂಡು ಪಶ್ಚಾತ್ತಾಪ ದಗ್ಧನಾಗುವನು. ಹಲಕಾಲದ ನಂತರ ಅವನಲ್ಲಿ ಸಂಪೂರ್ಣ ಶರಣಾಗತಿ



ಅತ್ಯಗತ್ಯವಾಗುತ್ತದೆ. ದೇವರ ಶಕ್ತಿ ಎಷ್ಟು ಅಪಾರವೆಂದರೆ ಒಬ್ಬ ಸಾಧಕನು ಸಾಧನೆಯನ್ನೆ ಮಾಡದವನಾದರೂ, ಅವನು ಶರಣಾಗತನಾದ ಕೂಡಲೇ ದೇವರೇ ಅವರ ಪರವಾಗಿ ನಿಂತು ನಡೆಸುತ್ತಿದ್ದಾನೆ ಎಂದು ತಿಳಿಯಬೇಕು.

ದೇವರು ಪರಿಪೂರ್ಣವಾಗಿ ಆಧ್ಯಾತ್ಮಿಕ ಲೋಕಕ್ಕೆ ಸೇರಿದವನೆಂದೂ, ದೈನಂದಿನ ಜೀವನದ ಕಠಿಣ ಭವ ತೊರೆಯೊಳಗೆ ಕಷ್ಟಪಟ್ಟು ಈಜುತ್ತಿರುವ ನಮ್ಮಿಂದ ಆತ ದೂರವಾಗಿದ್ದಾನೆ ಎಂದೂ ತಿಳಿದರೆ ಅದು ಸತ್ಯದೂರವಾದ ಮಾತಾಗುತ್ತದೆ. ಪೂರ್ಣ ವಿರಕ್ತಿಯಲ್ಲಿರುವಂತಹ ಪೂರ್ಣ ಆಸಕ್ತಿ ಅವನಿಗಿದ್ದು, ಸರ್ವಂಕಷವಾದ ಕರುಣೆಯನ್ನು ಹೊಂದಿರುವುದೇ ಅವನ ವೈಶಿಷ್ಟ್ಯ. ಎಲ್ಲರಿಗೂ ಸುಲಭದಲ್ಲಿ ದೊರೆಯಬಲ್ಲದ್ದು ಅವನ ದಯೆ. ಅಸಂಖ್ಯ ಜನರು ತಮ್ಮ ಅಸಂಖ್ಯ ಬೇಡಿಕೆಗಳೊಡನೆ ಅವನಿಗೆ ಅನುದಿನವೂ ಮೊರೆಯಿಡುತ್ತಾರೆ. ಆತನ ದರ್ಶನ ಪಡೆಯತಕ್ಕ ಜನರ ಒಂದು ಪಟ್ಟಿಯಿಂದ ಆತನ ಪ್ರಭಾವದ ವಿಸ್ತಾರವನ್ನು ಗುರುತಿಸಬಹುದು. ಅನಾಥ ವಿಧವೆಯರು, ಪತಿಯಿಂದ ಪರಿತ್ಯಕ್ತರಾದವರು, ಖ್ಯಾತರಾಗದ ವಿದ್ವಾಂಸರು, ಭ್ರಷ್ಟ ಅಧಿಕಾರಿಗಳು, ಕೂದಲು ಸೀಳುವ, ವಾಗ್ಯುದ್ಧ ಮಾಡುವ ಪರಿಣತರು, ನಂಬಿಕೆಯಿಲ್ಲದವರು, ವಿದೇಶೀಯರು, ಮುನಿಗಳು, ಸಂತರು, ರಾಜಕಾರಣಿಗಳು ಅತಿಗಣ್ಯವ್ಯಕ್ತಿಗಳು ಕಂಟ್ರಾಕ್ಟರುಗಳು, ಲಾಯರುಗಳು, ವಿದ್ಯಾರ್ಥಿಗಳು, ನಿರಕ್ಷರಿಗಳು, ಡಾಕ್ಟರುಗಳು, ಬೇಸಾಯಗಾರರು, ಕಾರ್ಮಿಕರು, ಆಚಾರ್ಯ ಪುರುಷರು, ಉಪಾಧ್ಯಾಯರು, ಅರ್ಚಕರು, ಆಗಮಿಕರು, ಏನಾದರೂ ಮಾಡಲು ಪ್ರಯತ್ನಿಸುತ್ತಿರುವವರು, ಏನೂ ಮಾಡಲಾರದವರು - ಎಲ್ಲರೂ ಸ್ವಾಮಿ ದರ್ಶನಕ್ಕೆ ಕಾದು ನಿಲ್ಲುತ್ತಾರೆ. ಏನನ್ನಾದರೂ ಆಶಿಸಿ ಬರುವವರು ಕೆಲವರಾದರೆ ಆಸಕ್ತಿಯಿಂದ ಆಗಮಿಸುವವರು ಕೆಲವರು. ಆತ ಮಾತ್ರ ಸರ್ವರಿಗೂ ಸುಲಭ. ಅವರವರ ಭಾವಕ್ಕೆ ಅವರವರ ಭಕುತಿಗೆ ತಕ್ಕಂತೆ ಅವರವರ ಭಾಷೆಯಲ್ಲಿ ಆತ ಮಾತನಾಡುತ್ತಾನೆ.

ಆ ಪರಮಾತ್ಮನ ಆಕಾರವು ಆತನ ಅಂತರಂಗವನ್ನು ಬಿಂಬಿಸುತ್ತದೆ. ಆತನನ್ನು ಹಲವರು ಹಲವು ವಿಧದಲ್ಲಿ ವರ್ಣಿಸಿದ್ದಾರೆ. ಒಬ್ಬರಿಗೆ ಆತ ಶ್ಯಾಮಲವರ್ಣನಾಗಿ ಆಧ್ಯಾತ್ಮಿಕ ಶೋಭೆಯಿಂದ ಕಂಡುಬಂದರೆ ಮತ್ತೊಬ್ಬರಿಗೆ ಎತ್ತರದ ನೀಳವಾದ, ಸರಳವಾದ ಆಕಾರದವನಾಗಿ ಮಗುವಿನಂತಹ ನಗೆಯ ಮುಖವನ್ನು ಹೊಂದಿದ್ದಾನೆ. ಮೂರನೆಯವರಿಗೆ ಅವನ ಮುಖ ಮಾತ್ರ ಕಂಡುಬಂದು ಅಲ್ಲಿನ ಕಣ್ಣುಗಳಲ್ಲಿ ಆಕರ್ಷಿತರಾಗುತ್ತಾರೆ. ಆ ಕಂಗಳಲ್ಲಿ ದಯೆ, ಕಾಂತಿ, ಸಹಾನುಭೂತಿಗಳನ್ನು ಮಾತ್ರ ಕಾಣುವರು. ಇನ್ನೊಬ್ಬರು ಆತನ ಸನ್ನಿಧಿಯಲ್ಲಿ ಪ್ರಶಾಂತತೆಯನ್ನು ಅನುಭವಿಸಿದರು. **ಜಗತ್ತಿನಾದ್ಯಂತ ಹಲವಾರು ಮಂದಿ ಸ್ವಾಮಿಯ ದರ್ಶನದ ಅನುಭವವನ್ನು ದಾಖಲು ಮಾಡಿದ್ದಾರೆ. ಅವರುಗಳ ವ್ಯಕ್ತಿಗತ ವಿಚಾರಗಳ ಅನುಭವಗಳಲ್ಲಿ**

**ಯಾವುದೇ ಅಂತರವಿದ್ದರೂ ಮೂಲಭೂತವಾಗಿ ಸ್ವಾಮಿಯ ಆಧ್ಯಾತ್ಮಿಕ ಪ್ರಕಾಶದಲ್ಲಿ, ಆತನ ಸನ್ನಿಧಿಯ ಪ್ರಶಾಂತಿಯಲ್ಲಿ ಯಾವ ಭಿನ್ನಾಭಿಪ್ರಾಯವೂ ಕಂಡುಬರುವುದಿಲ್ಲ. ಆತನನ್ನು ಕಂಡ ಕೂಡಲೇ ಉಂಟಾಗುವ ಸಂತಸದ ಭಾವನೆಯ ವಿವರದಲ್ಲಿಯೂ ಎರಡು ಮಾತಿಲ್ಲ.**

ಶ್ರೀ ವೆಂಕಟೇಶ್ವರಸ್ವಾಮಿಯ ಅನುಗ್ರಹ ಪಡೆದ ಯಾರೇ ಆದರೂ ಆತನನ್ನು ಒಪ್ಪುವುದರಲ್ಲಿ ಎಂದೂ ತಡಬಡುವುದಿಲ್ಲ. ಸದ್ವರ್ತನೆಯ ಪೋಷಕ ದ್ರವ್ಯವು ಸತ್ ಚಿತ್ ನ ಸಮ್ಮುಖದಲ್ಲಿ ಸದಾಕಾಲವೂ ದೊರೆಯುತ್ತದೆ ಎಂದು ಹೇಳುತ್ತಾರೆ. ಇದರ ಅನುಭವ ಆದವರಿಗೆ ಯಾವುದೇ ಮಾತಿನ ಪುರಾವೆ ಬೇಕಾಗುವುದಿಲ್ಲ.

ಆಲಯಗಳೆಲ್ಲ ಜೈವಿಕ ಕ್ರಿಯಾಶೀಲತೆ ಯಿಂದ ಕೂಡಿದ ಸಂಸ್ಥೆಗಳೆನ್ನಲು ಉದಾಹರಣೆಯ ಅಗತ್ಯವಿದೆ ಎಂಬುದಾದರೆ ತಿರುಮಲೆಯ ಆಲಯ ಅಂತಹ ಒಂದು ಜೀವಂತಿಕೆಯ ಉದಾಹರಣೆಯನ್ನಬೇಕು.

### ವೇಂಕಟೇಶ್ವರಸ್ವಾಮಿಯ ಪ್ರಾಧಾನ್ಯ

ಶ್ರೀ ವೆಂಕಟೇಶ್ವರಸ್ವಾಮಿಯ ದರ್ಶನ ಪಡೆದ ಯಾರಿಗೇ ಆದರೂ ದೇವರು ಇರುವನೊ ಇಲ್ಲವೋ ಎಂಬ ಸಂದೇಹ ಬರುವುದಿಲ್ಲ. ಪಾಶ್ಚಾತ್ಯ ಶಿಕ್ಷಣ, ತರಬೇತಿ, ದೃಷ್ಟಿಕೋನಗಳನ್ನು ಹೊಂದಿದ ಹಲವರು ಪರಮಾತ್ಮನ ಬಗ್ಗೆ ಪರಿಪ್ರಶ್ನೆಗಳಲ್ಲಿ ತೊಳಲುತ್ತ ಅವನ್ನು ಹೇಗೆ ಪರಿಹರಿಸಿಕೊಳ್ಳುವುದೆಂಬುದನ್ನು ಹುಡುಕುತ್ತ ಇರುವಾಗ, ಏಳು ಬೆಟ್ಟಗಳ ಒಡೆಯನು ಅವರ ಆಧ್ಯಾತ್ಮಿಕ ಅನ್ವೇಷಣೆಯನ್ನು ಪೂರ್ಣಗೊಳಿಸಿ, ಮಾನಸಿಕ ದೃಷ್ಟಿ ಕೋನದಲ್ಲಿ ದೂರಗಾಮೀ ಪರಿವರ್ತನೆಗಳನ್ನುಂಟುಮಾಡಿ ಅವರನ್ನು ಒಂದು ಸಮಾಧಾನದ ನೆಲೆಗೆ ತರುವಲ್ಲಿ ಸಾಧನೋಪಾಯನಾಗಿದ್ದಾನೆ ಎಂಬುದು ಅತಿಶಯವಲ್ಲ. ನಾಶವಾಗದ ಎಲ್ಲ ವಸ್ತು ವಿಷಯಗಳ ಒಟ್ಟುಮೊತ್ತವೇ ಆತ. ಮನುಷ್ಯನಿಗೆ ತಾನಾರೆಂಬುದನ್ನು ತಿಳಿಸಿಕೊಡಲು ಆತನನ್ನು ಕೈಚಾಚಿ ಸ್ಪರ್ಶಿಸಿ, ಅನುಗ್ರಹಿಸುವ ಸ್ವಾಮಿಯನ್ನು ಒಮ್ಮೆ ನಿಜವಾಗಿ ದರ್ಶಿಸಿದವನು ತನ್ನ ಜೀವನದಲ್ಲಿಯೇ ಯಾರನ್ನೂ ದ್ವೇಷ ಮಾಡಲಾರ. ಎಲ್ಲ ರೀತಿಯ ಜನರೂ ಆತನನ್ನು ನೋಡಲು ನೆರೆಯುವರು. ಪರಿತ್ಯಕ್ತರು, ಪರಿಣಯವಾಗದವರು, ಪತಿವಿಹೀನರು ಪತ್ನೀದೂರರು, ಬಡವರು, ಬಲ್ಲಿದರು, ಕೆಲಸಿಗರು, ನಿರುದ್ಯೋಗಿಗಳು, ಅವರವರ ಭಕ್ತಿಗೆ ತಕ್ಕಂತೆ ಅವರವರು ಅವನಲ್ಲಿ ಸಮಾಧಾನ ಸಾಂತ್ವನ ಪಡೆಯುತ್ತಾರೆ. ಎಲ್ಲರೂ ಅವನಿಗೆ ಸಮಾನರೇ ಆದಮೇಲೆ ಪರಸ್ಪರರಲ್ಲಿ ಭೇದವೇನು ಬಂತು. ಅವರವರ ಬೇಡಿಕೆಗಳೇನೇ ಇದ್ದರೂ ಸ್ವಾಮಿಯ ದರ್ಶನಾನಂತರ ತಮ್ಮ ತಮ್ಮ ಹಾದಿ ಹಿಡಿದು ಹೊರಟಾಗ ಅವರೆಲ್ಲ ಹೊಸಬರಾಗಿ, ಹೊರಡುತ್ತಾರೆ. ಅವರ ಬೇಡಿಕೆ ಈಡೇರಬಹುದು ಇಲ್ಲದಿದ್ದರೂ ಮನಶ್ಶಾಂತಿ ದೊರೆಯುವುದು ಸಿದ್ಧ. ಏನೇ ಬಂದರೂ ಎದುರಿಸುವ ಶಕ್ತಿ ಪಡೆಯುವುದು ಖಚಿತ.

ಆತನ ದರ್ಶನವೆನ್ನುವುದು ಒಂದು ಅನುಭಾವ. ತಮ್ಮ ಬೇಡಿಕೆಗಳೊಡನೆ ಹೋದವರೆಲ್ಲ ಆತನನ್ನು ಭೇಟಿಯಾಗಿ ಮರಳುತ್ತಾರೆ. ಅವರ ನಯನದಲ್ಲಿ ನೀರು ಇದ್ದರೂ ಹೃದಯದಲ್ಲಿ ಸಾತ್ವಿಕ ಅಂಗೀಕೃತ ಭಾವ ತುಂಬಿರುತ್ತದೆ. ದೇವರ ಹಿರಿಮೆಯಿರುವುದು ಈ ಗುರುತರಿಯದ ವಿವರಿಸಲಾಗದ ಪರಿವರ್ತನೆ ಯನ್ನು ಪ್ರತಿಯೊಬ್ಬರಲ್ಲಿಯೂ ಉಂಟು ಮಾಡುವುದರಲ್ಲಿ. ಇದರಿಂದಾಗಿ ಭಕ್ತಿ ಗೌರವದಿಂದ ನಂಬಿಕೆ ವಿಶ್ವಾಸಗಳಿಂದ ಆತನ ಕಡೆ ತಿರುಗುವುದು ಸಹಜವಾಗುತ್ತದೆ. ಉದ್ದುದ್ದ ಪ್ರಶ್ನೆ ಪತ್ರಿಕೆಗಳನ್ನು ಹಿಡಿದು ಅವನ ಬಳಿ ಹೋದವರು ಯಾವುದೇ ಪ್ರಶ್ನೆ ಮಾಡದೆ ಹಿಂದಿರುಗುವುದುಂಟು. ಅವರಿಗೆ ಪ್ರಶ್ನಿಸುವ ಅಗತ್ಯವೇ ಕಂಡುಬರುವುದಿಲ್ಲ.

ಆತನ ಮುಖ ಮುದ್ರೆ ನಸುಗೆಂಪು ನಸುಗಪ್ಪು ಬಣ್ಣದಿಂದ ಕೂಡಿ ಒಂದು ಸೂಕ್ಷ್ಮವಾದ ಆಧ್ಯಾತ್ಮಿಕ ಶೋಭೆಯನ್ನು ಹೊಂದಿರುವುದು. ಆತನ ಮುಖಭಾವ ಸಾಧಾರಣ ಸುಂದರ. ಆತನ ವಿಶಾಲ ನಯನಗಳು ವಿಶೇಷಸುಂದರ ಹಾಗೂ ಶಾಂತ. ಮಧ್ಯಕಾಲೀನ ಮುನಿಗಳನ್ನು ನೆನಪಿಗೆ ತಂದರೂ, ಈ ರೂಪದ ಒಳಗೆ ಯಾವುದೋ ಅಗಾಧ ಸತ್ವ ತೇಜ - ಮೇಲೆ ಕಾಣಿಸುವುದಕ್ಕಿಂತ ಬೇರೆಯೇ ಆದದ್ದು - ಇದೆಯೆನ್ನಿಸುವುದು. **ನಾವು ಪವಿತ್ರವೆಂದು ಭಾವಿಸುವೆಲ್ಲದರ ತವನಿಧಿ ಆತ. ನಿಜವಾದ ಧರ್ಮ ಹಾಗೂ ಉಪನಿಷತ್ತುಗಳ ಸಾರ ಸರ್ವಸ್ವವಾಗಿದ್ದಾನೆ. ಆತನ ಮೂಲಕವೇ ವಾಚಾಮಗೋಚರವಾದ ಪರಮಾದರ್ಶವು ಬಹಿರ್ಗತವಾಗುತ್ತದೆ.** ನಾವು ಸಾಧಾರಣವಾದ ಪ್ರಾಣಿ ಮಾತ್ರರೇ ಅಲ್ಲವೆಂಬುದನ್ನು ಆತ ನಮಗೆ ತಿಳಿಸಿಕೊಡುತ್ತಾನೆ. ನಾವು ಪರಮಾತ್ಮನ ಒಂದು ಅಂಶವೆಂದೂ, ಪರಮಾತ್ಮನನ್ನು ಪುನಃ ಸೇರುವುದೇ ನಮ್ಮ ಗಂತವ್ಯವೆಂದೂ ಆತ ತಿಳಿಸುತ್ತಾನೆ. ಈ ಕಲಿಯುಗದಲ್ಲಿ ಮಾನವರ ಉತ್ತಾರಣ ಮಾಡುವುದೇ ಅವನ ಉದ್ದೇಶವಾಗಿ ಆದಕ್ಕಾಗಿಯೇ ಆಲಯದಲ್ಲಿ ನೆಲೆಸಿರುವನು.

ಆತ ಬಯಸುವುದೆಲ್ಲ ಮನಃಪೂರ್ವವಾದ ಆಸಕ್ತಿ, ಪೂರ್ಣ ಮನಸ್ಸಿನಿಂದ ಸಾಕ್ಷಾತ್ಕಾರವನ್ನು ಬಯಸುವವರು ಅವನಿಂದ ಪರಮ ತತ್ವವನ್ನು ಪಡೆಯುವರು. ಮನ ಶುದ್ಧವಾಗಿದ್ದರೆ ಅಲ್ಲಿ ಭಕ್ತಿ ವಿಶ್ವಾಸಗಳನ್ನು ಆತನೇ ಬೆಳೆಸುವನು. ಕೆಲವು ಕಾಲದ ನಂತರ ಎಲ್ಲ ಕೋರಿಕೆ ಕಾಮನೆಗಳೂ ಮರೆಯಾಗುತ್ತ ಕಡೆಗೆ ಸಾಧನೆಯ ಆಸಕ್ತಿಯೂ ಕಳಚಿಕೊಳ್ಳುತ್ತದೆ. ಆತನಿಗೆ ಶರಣಾಗತ ರಾಗುವುದನ್ನು ಮಾತ್ರವೇ ಅಪೇಕ್ಷಿಸು ವಂತಾಗುತ್ತದೆ. ಆತನ ಆಲಯದಲ್ಲಿ ನಿರಂತರವಾದ ಶಾಂತಿ, ಶಮನಗಳನ್ನು ಬಯಸುವಂತೆ ಆಗುತ್ತದೆ. ಕೆಲಕಾಲಾನಂತರ ಆತನಲ್ಲಿ ತನು ಮನಗಳೆಲ್ಲದರ ಸಂಪೂರ್ಣ ಸಮರ್ಪಣೆ ಯುಂಟಾಗುತ್ತದೆ. ದೇವರು ಬಹಳ ಸೂಕ್ಷ್ಮವಾಗಿ ಆದರೆ ಖಚಿತವಾಗಿ ದಾರಿಯನ್ನು ತೋರಿಸುತ್ತ ನಡೆಸುವನೆಂಬುದು ಸ್ಪಷ್ಟವಾಗಿದೆ. ಆತನಲ್ಲಿ ಶರಣಾಗತರಾದವರಿಗೆ ಸಾಫಲ್ಯ ಸಿದ್ಧಿಯಾಗುವುದು. ಈ ಮಾತು ಬರೇ ವೇದಾಂತವೆಂದು ಮಾತ್ರವಲ್ಲ, ಅನೇಕರ ಅನುಭವ ಸಿದ್ಧಾಂತವೂ ಹೌದು. **ನಾವು ನಮ್ಮ ಪಾಪಪಂಕಿಲವಾದ ವಿಷಯಪೂರಿತವಾದ, ಮುಷ್ಕರ ಹೂಡುವ ಮನಸ್ಸನ್ನು ಆತನಲ್ಲಿ ಶರಣುಗೊಳಿಸಿದಲ್ಲಿ ಆತನಿಂದ ಅಮೂಲ್ಯವಾದ ದಯೆ, ಕರುಣೆ, ಸಹಾನುಭೂತಿಗಳನ್ನು ಪ್ರತಿಯಾಗಿ ಪಡೆದು ಉದ್ಧಾರವಾಗುವುದರಲ್ಲಿ ಸಂದೇಹವಿಲ್ಲ.**

(ಸಂಪೂರ್ಣ)

★★★★★




# ಅಕ್ಟೋಬರ್ ತಿಂಗಳಿನಲ್ಲಿ ಅಧಿಕವಾದ
# ಶ್ರೀವಾರಿ ಸೇವೆ

ಅಕ್ಟೋಬರ್ ತಿಂಗಳು ತಿರುಮಲೆಯಲ್ಲಿ ಎರಡು ಕಾರಣಗಳಿಂದ ಶ್ರೀವಾರಿಸೇವೆಯ ಸ್ವಯಂ ಸೇವಕರಿಗೆ - ಭಾಗವತ ಸೇವೆಗೆ - ಮುಖ್ಯವಾಯಿತು. ಅಧಿಕ ಮಾಸದ ವರ್ಷವಾದದ್ದರಿಂದ ಅಕ್ಟೋಬರ್‌ನಲ್ಲಿ ಅಧಿಕ ಬ್ರಹ್ಮೋತ್ಸವ. 17-10-2001 ರಿಂದ 25-10-2001 ರ ವರೆಗೆ. ಜೊತೆಗೇ ಮಾನವ ಸೇವೆಯ ಮತ್ತೊಂದು ಮುಖ - ಜನಸೇವೆಯ ಜನಾರ್ದನ ಸೇವೆಗೆ ಅವಕಾಶ. ಆಂಧ್ರ ಪ್ರದೇಶದ ಅಧಿಕವರ್ಷ ಪೀಡಿತ ಸಂತ್ರಸ್ತರಿಗೆ ಸೇವೆ ಮಾಡುವ ಅವಕಾಶ ದೊರೆಯಿತು.

ಅಕ್ಟೋಬರ್ ತಿಂಗಳ ಮೊದಲ ಹದಿನೈದು ದಿನ ಒಟ್ಟು ಒಂದು ಸಾವಿರ ಮಂದಿ ಶ್ರೀವಾರಿ ಸೇವೆಯನ್ನು ಸಲ್ಲಿಸಿದರು. ಪ್ರತಿ ದಿನ ಸರಾಸರಿ ನೂರು ಮಂದಿಯಂತೆ ಎನ್ನಬೇಕು. ಇವರಲ್ಲಿ ಮಹಿಳೆಯರು 335 ಮಂದಿಯಾದರೆ ಪುರುಷರು 475 ಮಂದಿ ಯಾಗಿದ್ದರು. ಬ್ರಹ್ಮೋತ್ಸವದ ಒಂಬತ್ತು ದಿನಗಳಲ್ಲಿ ಒಟ್ಟು 3906 ಮಂದಿ ಕೆಲಸ ಮಾಡಿದರು.

ವಿಕಾಸ ತರಂಗಿಣಿಯ ಸ್ವಯಂಸೇವಕರ ತಂಡ ಶ್ರೀವಾರಿಸೇವೆಯಲ್ಲಿ ಭಾಗವಹಿಸುವುದು ಒಂದು ಪ್ರತ್ಯೇಕವೆನ್ನಬೇಕು. ಅವರು ದಿನವೂ ಪ್ರಾತಃಕಾಲದಲ್ಲಿ ಆಸ್ಥಾನ ಮಂಟಪದ ವಿಷ್ಣು ಸಹಸ್ರನಾಮ ಪಾರಾಯಣಾಗೋಷ್ಠಿಯಲ್ಲಿ ಎಲ್ಲರೂ ಸೇರುತ್ತಾರೆ. ಆ ನಂತರ ಒಟ್ಟು 250 ಮಂದಿ ಹಲವು ಹನ್ನೊಂದು ಬ್ಯಾಚುಗಳಾಗಿ, ತಮ ತಮಗೆ ನಿಯುಕ್ತವಾದ ಕಾರ್ಯಕ್ಷೇತ್ರಗಳಿಗೆ - ಒಂದು ಗುಂಪು ಅನ್ನದಾನಂ ಕಾಂಪ್ಲೆಕ್ಸ್‌ನ ತರಕಾರಿ ಹಚ್ಚುವ ಕೆಲಸಕ್ಕೆ, ಒಂದು ಗುಂಪು ಮಾಡಿದ ಅಡಿಗೆಯನ್ನು ಯಾತ್ರಿಕರಿಗೆ ಬಡಿಸುವ ಕೆಲಸಕ್ಕೆ, ಒಂದು ಗುಂಪು ಯಾತ್ರಿಕ ಸರದಿಯ ಸಾಲಿನಲ್ಲಿ ಆಹಾರದ ಪೊಟ್ಟಣಗಳನ್ನು ಹಂಚಲಿಕ್ಕೆ, ಸರದಿಯ ಸಾಲಿನಲ್ಲಿ ಶಿಸ್ತು ಸಂಯಮಗಳ



ರಕ್ಷಣೆಗೆ, ಕಲ್ಯಾಣ ಕಟ್ಟೆಯಲ್ಲಿ ಯಾತ್ರಿಕರ ವ್ಯವಸ್ಥಾಬದ್ಧತೆಯಲ್ಲಿ ಒಂದು ಗುಂಪು, ಸಾರ್ವಜನಿಕರ ಸಲಹೆ ಸೂಚನೆಗಳನ್ನು ನೀಡುವ ವಾರ್ತಾಕೇಂದ್ರಗಳಲ್ಲಿ ಕೆಲಸಮಾಡಲು ತೆರಳುತ್ತಿದ್ದವು.

ಚೆನ್ನೈನ ಶ್ರೀವಾರಿ ಸೇವಾಸಮಿತಿಯಿಂದ ಇಪ್ಪತ್ತೈದು ಮಂದಿ ಬಂದಿದ್ದರೆ, ಪೀಠಾಪುರದ ಇಪ್ಪತ್ತು ಮಂದಿ ಶ್ರೀ ಲಕ್ಷ್ಮೀ ಶ್ರೀನಾಥ್ ಅವರ ನೇತೃತ್ವದಲ್ಲಿ ಬಂದಿದ್ದರು. ಶ್ರೀನಾಥ್ ಹಾಗೂ ಶ್ರೀಲಕ್ಷ್ಮಿ ದಂಪತಿಗಳು ಪೀಠಾಪುರದವರು. ಶ್ರೀನಾಥ್ ರೈಲ್ವೆ ಇಂಜನೀಯರಾಗಿದ್ದವರು. ಹತ್ತು ಮಂದಿ ಮಹಿಳೆಯರಾದರೆ ಹತ್ತು ಮಂದಿ ಪುರುಷರು. ಅವರು ಸ್ವಾಮಿಸೇವೆಯಲ್ಲಿ ಭಾಗವಹಿಸುತ್ತಿರುವುದು ಮೂರನೆಯ ಬಾರಿ ಏಪ್ರಿಲ್‌ನಲ್ಲಿ ಮೊದಲ ಬಾರಿ ಬಂದಿದ್ದರು. ಆಷಾಢದಲ್ಲಿ ಮತ್ತೆ ಬಂದಿದ್ದರು. ಮೊದಲ ಬಾರಿ





ಬಂದಾಗ ಆಸ್ಥಾನ ಮಂಟಪದಲ್ಲಿ ಕಾರ್ಯಕ್ರಮ ನೀಡಿದ್ದರು. ಈಗ ಅನ್ನದಾನ ಕಾಂಪ್ಲೆಕ್ಸ್‌ನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇಲ್ಲಿನ ಅಡಿಗೆ ವ್ಯವಸ್ಥೆ ಬಹಳ ಚೆನ್ನಾಗಿದೆ. ಈ ಒಂದು ಅನುಭವ ಮತ್ತೆ ಮತ್ತೆ ಪಡೆದು ಆನಂದಿಸುವಂತಹ ಸಂದರ್ಭದ್ದು. ಎಲ್ಲರಿಗೂ ಸಿಗಬೇಕಾದ್ದು ಅಗತ್ಯ. ಅವರ ಪ್ರಕಾರ ಶ್ರೀವಾರಿ ಸೇವೆಯಲ್ಲಿ ಭಾಗವಹಿಸುವ ಸ್ವಯಂ ಸೇವಕರಿಗೆ ಒಂದು ಗಂಟೆ ಅಥವಾ ಅರ್ಧಗಂಟೆ ತರಬೇತಿ ತರಗತಿಯಿರಬೇಕು.

ಶ್ರೀ ಶ್ರೀ ಚಿನ್ನಜೀಯರ್ ಅವರ ವಿಕಾಸ ತರಂಗಿಣಿಯಲ್ಲಿ ತಿರುಪತಿಯವರೂ ಇದ್ದರು. ಶ್ರೀ ಎಂ. ರಾಧಾಕೃಷ್ಣಯ್ಯ ಅವರು ಹೇಳುವಂತೆ ತಿರುಪತಿಯ ಗೋವಿಂದರಾಜಸ್ವಾಮಿ ಗುಡಿಯ ಬೀದಿಯ ಉತ್ತರಾದಿ ಮಠದಲ್ಲಿ ಸಭೆ ಸೇರಿ ಮೂವತ್ತು ಮಂದಿ ಸೇವೆ ಮಾಡಲು ಬಂದಿದ್ದರು. ಇವರೆಲ್ಲ ಪದೇ ಪದೇ ಬರುವ ಆಸಕ್ತಿ, ಅವಕಾಶ ಇರುವಂತಹವರು. ವಿಜಯವಾಡದ ನಾಗಮಣಿ ಆರುಮಂದಿಯೊಡನೆ ವಿಕಾಸತರಂಗಿಣಿಯಲ್ಲಿ ಸೇರಿ ಬಂದವರು. ಭಗವದ್ಗೀತೆಯ ವಿಷ್ಣು ಸಹಸ್ರನಾಮದ ಶ್ಲೋಕಗಳನ್ನು ಹೇಳಿಕೊಳ್ಳುತ್ತ ಸೇವೆಯಲ್ಲಿ ತೊಡಗಿದ್ದರು. ರೈಲ್ವೇ ಕಾಲೊನಿಯ ಶ್ರೀ ಕೃಷ್ಣಮೂರ್ತಿ ಮೂರನೆಯಬಾರಿ ಶ್ರೀವಾರಿ ಸೇವೆ ಸಲ್ಲಿಸುತ್ತಿದ್ದಾರೆ. ಶ್ರೀಮತಿ ಸಾಮ್ರಾಜ್ಯಲಕ್ಷ್ಮಿ ಸಹ ಹೀಗೇ.

ವೀರಭದ್ರೇಶ್ವರಸ್ವಾಮಿ ಭಜನ ಮಂಡಳಿಯ ಡಾ|| ವೆಂಕಟೇಶ್ವರರೆಡ್ಡಿ ಅವರು, ಶ್ರೀ ವೆಂಕಟಸುಬ್ಬಾರೆಡ್ಡಿ ಅವರ ನೇತೃತ್ವದಲ್ಲಿ 26 ಮಂದಿಯ ತಂಡದಲ್ಲಿ ಬಂದಿದ್ದವರು. ಶ್ರೀವಾರಿ ಸೇವೆಯಲ್ಲಿ ಪಾಲುಗೊಳ್ಳುತ್ತಿರುವುದು ನಾಲ್ಕನೆಯ ಬಾರಿ.

ಈರೋಡಿನ ಅಖಿಲಭಾರತ ಅಯ್ಯಪ್ಪ ಸೇವಾಸಮಿತಿಯ ಹನ್ನೊಂದು ಮಂದಿ ಮಹಿಳೆಯರು ಪ್ರತ್ಯೇಕ ಉಲ್ಲೇಖಕ್ಕೆ ಅರ್ಹರಾದವರು. ಇವರಲ್ಲಿನ ಶ್ರೀಮತಿ ಮಾಣಿಕ್ಯಂ, ಶ್ರೀಮತಿ ಸ್ವಾಮಿ ಆತ್ತಾಳ್, ಶ್ರೀಮತಿ ವಿಜಯ ಲಕ್ಷ್ಮಿಯವರುಗಳು 'ರೊಂಬ ನಲ್ಲ ಇರುಕ್ಕುದು' ಎಂದು ಸೇವೆಯಲ್ಲಿ ತೊಡಗಿದ್ದಾರೆ.

ಸೇಲಂ ನಲ್ಲಿ ಅನ್ನಮಯ್ಯ ಸೇವಾ ಟ್ರಸ್ಟ್ 17 ಮಂದಿಗೆ ಈ ಸೇವೆ ಅತ್ಯಂತ ಉಚಿತವೂ ಆಹ್ಲಾದಕರವೂ ಆಗಿದೆ ಎಂಬುದನ್ನು ಗಮನಿಸಲಾಯಿತು. ಇವರಲ್ಲಿ ಹಲವರು ಅನ್ನದಾನದ ಎಲೆ ಎತ್ತುವ ಕಾಯಕದಲ್ಲಿ ತೊಡಗಿದ್ದರು. 'ಅಯ್ಯಾ ಭಕ್ತರಿಗೆ ಸೇವೆ ಮಾಡುವುದು ಸ್ವಾಮಿಗೆ ಸೇವೆ ಮಾಡಿದಂತೆಯೇ ಅಲ್ಲವೇ?' ಎಂದು ಪ್ರಶ್ನಿಸಿದರು ಅವರಲ್ಲಿನ ಮುರಳೀ ಕೃಷ್ಣ.

ಹೈದರಾಬಾದಿನ ಹೈಕೋರ್ಟಿನ ಹತ್ತು ಮಂದಿ ಮಹಿಳೆಯರ ತಂಡ ಪ್ರತ್ಯೇಕವಾಗಿ ಸ್ವಾಮಿಯ ಭಕ್ತರ ಸೇವೆಗೆಂದೇ ಬಂದವರು. ಅವರಿಗೆ ಶ್ರೀವಾರಿ ಸೇವೆ ಮಾಡುವ ಉದ್ದೇಶದಿಂದಲೇ ತಿರುಪತಿಗೆ ಬರುವ ಅಪೇಕ್ಷೆ. ಮೊದಲಿಗೆ ಎಂತಹ ಅನುಭವ ಉಂಟಾಗುವುದೋ ಎಂಬ ಸಂದೇಹಗಳಿದ್ದರೂ ಇಲ್ಲಿ ಬಂದ ಮೇಲೆ ಎಲ್ಲ ರೀತಿಯ ಸಂದೇಹಗಳೂ ದೂರವಾಗಿ ಸಂತಸ, ಸೇವಾಭಾವಮಾತ್ರವೇ ಮಿಕ್ಕಿದೆ. ಅವರು ಸಪ್ತಗಿರಿ ಮಾಸಪತ್ರಿಕೆಯಲ್ಲಿ ನೋಡಿ ವಿವರಗಳನ್ನು ತಿಳಿದುಕೊಂಡು ಬಂದವರು. ಅವಕಾಶ ದೊರೆತರೆ ಮತ್ತೆ ಮತ್ತೆ ಬಂದು ಸೇವೆ ಮಾಡುವುದಾಗಿ ತಿಳಿಸಿದರು.

ಅಕ್ಟೋಬರ್ ತಿಂಗಳಿನಲ್ಲಿ ಒಟ್ಟು 5406 ಮಂದಿ ಶ್ರೀವಾರಿ ಸೇವೆಯಲ್ಲಿ ಭಾಗವಹಿಸಿದ್ದರು ಎಂದು ವರದಿಯಾಗಿದೆ.

ತಿಂಗಳ ಮಧ್ಯಭಾಗದಲ್ಲಿ ಆಂಧ್ರಪ್ರದೇಶ ದಲ್ಲಿ ತೂಫಾನು ತಳಮಳ ವುಂಟಾಯಿತು. ಆಗ ಕಡಪ ನೆಲ್ಲೂರು ಜಿಲ್ಲೆಗಳಲ್ಲಿ ಅಧಿಕ ವರ್ಷವಾಗಿ ಅಹೋರಾತ್ರಿ ಜನ ಬೀದಿಯಲ್ಲಿ ನಿಲ್ಲ ಬೇಕಾಯಿತು. ಎಲ್ಲ ಸಂಪರ್ಕ ಸಾಧನಗಳೂ ಕಡಿದು ಹೋಗಿ ಜಲದಿಗ್ಬಂಧನದಲ್ಲಿ ಸಿಲುಕಿದ ಜನಕ್ಕೆ ಆಹಾರ, ನೀರಿನ ಪೊಟ್ಟಣಗಳನ್ನು ಸರಬರಾಜು ಮಾಡುವಲ್ಲಿ ತಿ.ತಿ.ದೇ. ಮಹತ್ವದ ಪಾತ್ರ ವಹಿಸಿತು. ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಅವರ ಅಧ್ವರ್ಯುತನದಲ್ಲಿ ಶ್ರೀವಾರಿಸೇವಾಪಡೆ ತಕ್ಷಣವೇ ಕಾರ್ಯರಂಗಕ್ಕಿಳಿದು ಕೈಲಾದ ಪರಿಹಾರಕ್ರಮಗಳನ್ನು ಕೈಗೊಂಡಿತು. ಬೆಟ್ಟದ ಮೇಲಿನ ಅನ್ನದಾನ ಕಾಂಪ್ಲೆಕ್ಸ್‌ನಲ್ಲಿ ನೀರಿನ ಪೊಟ್ಟಣ, ಪುಳಿಯೋಗರೆ ಪೊಟ್ಟಣಗಳನ್ನು ತಿರುಮಲೆಯ ಸಂಯುಕ್ತ ಕಾರ್ಯ ನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಅವರು ಎದುರು ನಿಂತು ಸಿದ್ಧಗೊಳಿಸಿದಂತೆ, ಅವುಗಳನ್ನು ರೇಣಿಗುಂಟ ವಿಮಾನಾಶ್ರಯದಲ್ಲಿ ಕಾದುನಿಂತ ಹೆಲಿಕಾಪ್ಟರುಗಳಿಗೆ ತಲುಪಿಸುವ ಹೊಣೆಯ ಉಸ್ತುವಾರಿ ತಿರುಪತಿಯ ಸಂಯುಕ್ತಕಾರ್ಯನಿರ್ವಣಾಧಿಕಾರಿ ಶ್ರೀ ನಾರಾಯಣ ಅವರು ನೆರವೇರಿಸಿದರು. ತಿರುಪತಿಯ ರೈಲ್ವೆನಿಲ್ದಾಣದಲ್ಲಿ ಅನಿವಾರ್ಯ ವಾಗಿ ನಿಂತ ಯಾತ್ರಿಕರಿಗೆ ಉಚಿತ ಆಹಾರ, ಹಾಲು ನೀಡುವಲ್ಲಿ ಕಾರ್ಯನಿರ್ವಹಣಾಧಿಕಾರಿ ಯವರು ಖುದ್ದು ಹಾಜರಿದ್ದು ಕ್ರಮಗಳನ್ನು ತೆಗೆದುಕೊಂಡರು.

★★★★★

# ವೈಭವದ ನವರಾತ್ರಿ ಬ್ರಹ್ಮೋತ್ಸವಗಳು

ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿ ಆಲಯದಲ್ಲಿ ನವರಾತ್ರಿ ಬ್ರಹ್ಮೋತ್ಸವಗಳು 17-10-2001 ರಿಂದ 25-10-2001 ರ ವರೆಗೆ ಉತ್ಸಾಹ ಸಂಭ್ರಮ ವೈಭವಗಳಿಂದ ನಡೆದು ಸಂಪನ್ನವಾದವು. ಮೂರು ವರ್ಷಕ್ಕೆ ಒಮ್ಮೆ ಅಧಿಕ ಮಾಸದ ವರ್ಷ ಬಂದಾಗ ಸಾಧಾರಣ ವಾರ್ಷಿಕ ಬ್ರಹ್ಮೋತ್ಸವಗಳೊಂದಿಗೆ ನವರಾತ್ರಿಯಲ್ಲಿ ಮತ್ತೆ ಒಮ್ಮೆ ಬ್ರಹ್ಮೋತ್ಸವ ನಡೆಯುವುದು ಪರಂಪರೆಯಾಗಿದ್ದು ಇಲ್ಲಿ ಧ್ವಜಾರೋಹಣ ಇರುವುದಿಲ್ಲ, ಎಂದರೆ ಧ್ವಜ ಅವರೋಹಣವೂ ಆಗುವುದಿಲ್ಲ. ಮಿಕ್ಕಂತೆ ಎಲ್ಲ ಕಾರ್ಯಕ್ರಮಗಳೂ ಒಂದೇ ತೆರನಾಗಿರುತ್ತವೆ ಎಂಬುದೂ ಸ್ಪಷ್ಟವಾಗಿರುತ್ತದೆ.

ಅಕ್ಟೋಬರ್ 16 ರಂದು ಬ್ರಹ್ಮೋತ್ಸವಗಳ ಅಂಕುರಾರ್ಪಣವಾಯಿತು. 17 ರಂದು ಬೆಳಿಗ್ಗೆ (ಬುಧವಾರ) ಸ್ವಾಮಿ ಉಭಯನಾಯಕಿಯರೊಡನೆ ಬಂಗಾರದ ತಿರುಚ್ಚಿಯಲ್ಲಿ (ತಿರುಶಿಬಿಕೆ) ಊರ ಮೆರವಣಿಗೆಯಲ್ಲಿ ಆಗಮಿಸಿ ತಿರುವೀಧಿಗಳಲ್ಲಿನ ಜನವನ್ನು ಅನುಗ್ರಹಿಸಿದರು. ಅಂದು ಸಂಜೆ ಸಪ್ತಭೋಗಗಳ ದೊಡ್ಡ ಶೇಷವಾಹನದಲ್ಲಿ ಭೋಗಿಶಯನನು ಹೊರಬಂದು ಮೆರವಣಿಗೆಯಾಯಿತು. ಹದಿನೆಂಟರಂದು ಶುಕ್ರವಾರ ಚಿಕ್ಕ ಶೇಷವಾಹನ ಹಾಗೂ ಹಂಸವಾಹನಗಳು ನಡೆದವು. 19 ರಂದು ಸಿಂಹವಾಹನ ಮುತ್ತಿನಚಪ್ಪರ ವಾಹನಗಳು ನಡೆದವು. 20 ರಂದು ಶನಿವಾರ ಕಲ್ಪವೃಕ್ಷವಾಹನ ಸರ್ವಭೂಪಾಲವಾಹನಗಳು ನಡೆದವು. ಭಾನುವಾರ 21 ರಂದು ತಿರುಮಲೆಯಲ್ಲಿ ಮುಖ್ಯವಾದದಿನ (ಅಂದು ಗರುಡೋತ್ಸವ). ಬೆಳಗ್ಗೆ ಸ್ವಾಮಿಗೆ ಮೋಹಿನೀ ಅವತಾರ ಧಾರಣೆ. ದಂತದ ಪಲ್ಲಕ್ಕಿಯಲ್ಲಿ ಮೋಹಿನೀ ಅವತಾರದಲ್ಲಿ ಸ್ವಾಮಿ ಹೊರಬಂದಾಗ ಜೊತೆಯಲ್ಲಿಯೇ ಮತ್ತೊಂದು ಪಲ್ಲಕ್ಕಿಯಲ್ಲಿ ಕೃಷ್ಣಸ್ವಾಮಿಯ ಆಗಮನ.

ಅಂದು ಸಂಜೆ ಗರುಡವಾಹನ - ಸ್ವಾಮಿಯ ಉತ್ಸವವಿಗ್ರಹಕ್ಕೆ ಮೂಲವರರ ಲಕ್ಷ್ಮೀಹಾರ, ಮಕರ ಕಂಠಿಹಾರ, ಸಹಸ್ರನಾಮಹಾರ ಮುಂತಾದವುಗಳೆಲ್ಲವನ್ನು ಅಲಂಕರಿಸಿ ತಿರುವೀಧಿಗಳಲ್ಲಿ ಹೊರಬಂದಾಗ ಮೂಲವರರೇ ಬೀದಿವರೆದು ಬಂದಂತೆ. (ಇಷ್ಟುದಿನ ಮೂಲವರರ ಪ್ರತಿನಿಧಿಯಾಗಿ ಉತ್ಸವರರು ಮೆರವಣಿಗೆ ಬರುತ್ತಿದ್ದರು - ಎಲ್ಲ ಕಡೆಯೂ ಹೀಗೆಯೇ.) ಸ್ವಾಮಿಯ ಆಗಮನದಲ್ಲಿ ನಿಂತು ಕುಳಿತು ಕುಣಿದು ಹಾಡಿ ಹೊಗಳಿ ಹೃದಯಾನಂದವನ್ನು ಪಡೆಯಲು ಭಕ್ತ ಜನ ಸಂದೋಹ ಅತ್ಯಂತ ಉತ್ಸಾಹ

## ವಾರ್ತಾಲಹರಿ

ಸಡಗರದಿಂದ ತಿರುಮಲೆಗೆ ಆಗಮಿಸುತ್ತದೆ.

ಸೋಮವಾರ 21 ರಂದು ಬೆಳಗ್ಗೆ ಹನುಮದ್ವಾಹನ ಉತ್ಸಾಹದಿಂದ ನಡೆಯಿತು. ಅಂದು ಮಧ್ಯಾಹ್ನ ವಸಂತೋತ್ಸವ ಆಸ್ಥಾನದಲ್ಲಿ ನಡೆದ ಮೇಲೆ ಸ್ವಾಮಿಯನ್ನು ಪುಷ್ಪಕ ವಿಮಾನದಲ್ಲಿ ತಿರುವೀಧಿ ಮೆರವಣಿಗೆ ಮಾಡಲಾಯಿತು. ತಿ.ತಿ.ದೇ. ಉದ್ಯಾನವನ ವಿಭಾಗದ ಸಿಬ್ಬಂದಿ ತಯಾರಿಸಿದ ಆಲಯವಿಮಾನದ ಆಕಾರದ ಹೂವಿನ ವಿಮಾನದಲ್ಲಿ ಸ್ವಾಮಿಯು ಉಭಯ ನಾಯಕಿಯರೊಡನೆ ಊರಮೆರವಣಿಗೆಯಲ್ಲಿ ಹೊರಬಂದಾಗ ಭಕ್ತರು ಉತ್ಸಾಹ ಸಂಭ್ರಮಗಳಿಂದ ಸ್ವಾಗತಿಸಿದರು.

ಮಂಗಳವಾರದಂದು ಸೂರ್ಯಪ್ರಭ ವಾಹನ ಚಂದ್ರಪ್ರಭವಾಹನಗಳಾದವು. ಬುಧವಾರದಂದು ರಥೋತ್ಸವ. ಸ್ವಾಮಿಯು ರಥದಲ್ಲಿ ಉಭಯದೇವನಾಯಕಿಯರೊಡನೆ ಊರಮೆರವಣಿಗೆಯಲ್ಲಿ ಬಂದಾಗ ತಿರುವೀಧಿಗಳಲ್ಲಿ ಉತ್ಸಾಹವೋ ಉತ್ಸಾಹ. ಗೋವಿಂದನಾಮಘೋಷ ಮುಗಿಲು ಮುಟ್ಟಿತು.

ಮಾರನೆಯ ದಿನ ಚಕ್ರಸ್ನಾನ. ಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಸುದರ್ಶನ ಚಕ್ರವನ್ನೂ ಶ್ರೀ ವರಾಹಸ್ವಾಮಿ ಆಲಯಕ್ಕೆ ಕರೆತಂದು ತಿರುಮಂಜನ ಮಾಡಿದ ನಂತರ ಚಕ್ರಸ್ನಾನ ನೆರವೇರಿತು.

ಶನಿವಾರದಂದು ಸಂಜೆ ಸ್ವಾಮಿಯ ಸೇವೆಯಲ್ಲಿ ಭಾರತದ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಶ್ರೀ ಆನಂದ್ ಅವರು ಆಗಮಿಸಿದ್ದರು. (ಈಗ ನಿವೃತ್ತರಾಗಿದ್ದಾರೆ.) ಅವರೊಡನೆ ಆಂಧ್ರ ಪ್ರದೇಶದ ಹೈಕೋರ್ಟ್ ನ್ಯಾಯಾಧೀಶ ಶ್ರೀ ಸತ್ಯಬ್ರತ ಸಿನ್ಹ ಅವರೂ ಆಗಮಿಸಿದ್ದರು ನ್ಯಾಯಾಧೀಶರನ್ನು, ತಿ.ತಿ.ದೇ. ಪ್ರಾಧಿಕಾರದ ಅಧ್ಯಕ್ಷರು ಶ್ರೀ ಎ.ವಿ.ಎಸ್.ರೆಡ್ಡಿ ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮತ್ತಿತರ ಅಧಿಕಾರಿಗಳು ಆಲಯ ಅರ್ಚಕ ವೃಂದ ಸಂಪ್ರದಾಯ ರೀತ್ಯ ಸ್ವಾಗತಿಸಿದರು. ಅವರುಗಳಿಗೆ ಶ್ರೀ ರಂಗನಾಯಕ ಮಂಟಪದಲ್ಲಿ ವೇದಾಶೀರ್ವಾದವನ್ನೂ ಪ್ರಸಾದಗಳನ್ನೂ ಕೊಡಮಾಡಲಾಯಿತು.

ಬ್ರಹ್ಮೋತ್ಸವದ ನಂತರದ ದಿನ (ಚಕ್ರಸ್ನಾನದ ನಂತರದ ದಿನ) ವಿಜಯದಶಮಿ. ಸ್ವಾಮಿ ಸೀಮೋಲ್ಲಂಘನ ಮಾಡಿ ಪಾರುವೇಟಿ ಮಂಟಪಕ್ಕೆ ಬಂದು ಬೇಟೆಯಲ್ಲಿ ಭಾಗವಹಿಸುವ ಕಾರ್ಯಕ್ರಮ. ಮಲೆಯಪ್ಪ ಸ್ವಾಮಿಯನ್ನೂ ಉಭಯ ನಾಯಕಿಯರನ್ನೂ ಮೆರವಣಿಗೆಯಲ್ಲಿ ಮಾಡವೀಧಿಗಳ ಮೂಲಕ ತಿರುಮಲೆಯ ಪಾಪನಾಶನಂ ರಸ್ತೆಯಲ್ಲಿರುವ ಪಾರುವೇಟ ಮಂಟಪಕ್ಕೆ ಉತ್ಸಾಹ ಸಂಭ್ರಮಗಳಿಂದ

ಕರೆತರಲಾಯಿತು. ತಿ.ತಿ.ದೇ. ಆಸ್ಥಾನ ಪಂಡಿತ ಶ್ರೀ ಮಾಡಂಬಾಕಂ ಶ್ರೀನಿವಾಸಾಚಾರ್ಯರು ಈಟಿಯನ್ನೆಸೆದು ಬೇಟೆಯ ಆರಂಭವನ್ನು ಘೋಷಿಸಿದರು. ಶಾಲಾವಿದ್ಯಾರ್ಥಿ ಎನ್.ಸಿ.ಸಿ. ದಳದವರು ಗಾಳಿಯಲ್ಲಿ ಗುಂಡು ಹಾರಿಸಿ ಬೇಟೆಯನ್ನು ಸಾಂಗಗೊಳಿಸಿದರು. ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯ, ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಆಲಯ ಡೆ.ಇ.ಓ. ಶ್ರೀ ಕೃಷ್ಣಾರೆಡ್ಡಿ, ಆಲಯ ಪೇಷ್ಕಾರ್ ಶ್ರೀ ಡಿ.ಎಸ್. ಪ್ರಭಾಕರರಾವ್ ಎ.ಇ.ಓ. ಶ್ರೀ ಜಗನ್ನಾಥಂ ಮೊದಲಾದವರು ಭಾಗವಹಿಸಿದ್ದರು. ಬೇಟೆಯ ಕಾರ್ಯಕ್ರಮದ ನಂತರ ವಿಶ್ರಾಂತಿ ಪಡೆದ ಸ್ವಾಮಿಗೆ ನಿವೇದನೆಯಾಗಿ ಪ್ರಸಾದ ವಿತರಣೆಯಾಯಿತು.

ಬ್ರಹ್ಮೋತ್ಸವಗಳಲ್ಲಿ ಅಷ್ಟೂ ದಿನವೂ ತಿರುಪತಿ, ತಿರುಮಲೆಗಳಲ್ಲಿ ವಿಶೇಷವಾದ ಸಾಂಸ್ಕೃತಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು. ತಿರುಮಲೆಯ ಆಸ್ಥಾನಮಂಟಪದಲ್ಲಿ ಬೆಳಗ್ಗೆ ಗೀತಾಪಠಣವನ್ನು ದಿನವೂ ಮಹಾಕವಿ ಮುದಿವರ್ತಿ ಕೊಂಡಮಾಚಾರ್ಯರು ನೆರವೇರಿಸಿ ಕೊಟ್ಟಮೇಲೆ ವಿಷ್ಣು ಸಹಸ್ರನಾಮ ಪಾರಾಯಣ ನಡೆಯುತ್ತಿತ್ತು. ದಾಸಸಾಹಿತ್ಯ, ಆಳ್ವಾರ್ ಪ್ರಬಂಧ, ಧರ್ಮ ಪ್ರಚಾರ ಪರಿಷತ್‌ಗಳ ವತಿಯಿಂದ ವಿದ್ವಾಂಸರು ಧರ್ಮದ ಬಗ್ಗೆ ಹಲವು ಹತ್ತು ರೀತಿಯ ಉಪನ್ಯಾಸಗಳನ್ನು ನೀಡಿ ಪರಿಸರವನ್ನು ಪಾವನಗೊಳಿಸಿದರೆ ಹಲವು ಹನ್ನೊಂದು ಮಂದಿ ಗುರು ಹಿರಿಯರು ಧರ್ಮಸಂದೇಶವನ್ನು ನೀಡಿದರು. ಸಂಕೀರ್ತನ ಸೇವೆ, ಸಂಗೀತಸಭೆ, ಹರಿಕಥಾ ಕಾಲಕ್ಷೇಪಗಳು ನಡೆದವು. ತಿರುಮಲೆಯ ಬೇರೆ ಬೇರೆ ಕಡೆಗಳಲ್ಲಿ ಪುಸ್ತಕ ಪ್ರದರ್ಶನ ಮಾರಾಟಗಳನ್ನೂ ಏರ್ಪಡಿಸಲಾಗಿದ್ದಿತು.

ಈ ಬಾರಿಯ ಬ್ರಹ್ಮೋತ್ಸವಗಳ ವಿಶಿಷ್ಟಾಂಶವನ್ನು ಹೇಳಬೇಕು ಎಂದರೆ ಅದು ಮಳೆ. ಬ್ರಹ್ಮೋತ್ಸವ ಆರಂಭವಾದ ಹದಿನೇಳರಂದು ಆಂಧ್ರಪ್ರದೇಶದಲ್ಲಿ ತೂಫಾನು. ಕಡಪ, ನೆಲ್ಲೂರು ಚಿತ್ತೂರು ಜಿಲ್ಲೆಗಳಲ್ಲಿ ತೀವ್ರವಾಗಿಯೂ, ಆಂಧ್ರಪ್ರದೇಶದ ಇತರ ಭಾಗಗಳಲ್ಲಿ ವ್ಯಾಪಕವಾಗಿಯೂ ಆವರಿಸಿ, ಹೇಳಲಾಗದ, ಹೇಳಿ ತೀರದ, ನಷ್ಟವನ್ನು, ಕಷ್ಟವನ್ನುಂಟು ಮಾಡಿತು. ಜೊತೆಗೇ ಆಂಧ್ರಪ್ರದೇಶದಲ್ಲಿ ಆರ್.ಟಿ.ಸಿ. ಯವರ ಮುಷ್ಕರದಿಂದಾಗಿ ಯಾತ್ರಿಕರು ನಾನಾ ತೊಂದರೆಗಳಿಗೆ ಒಳಗಾದರು. ಆಂಧ್ರಪ್ರದೇಶದ ಮುಖ್ಯಮಂತ್ರಿಗಳ ದೂರದೃಷ್ಟಿ, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳ ಕಾರ್ಯಕ್ಷತೆ, ಇಬ್ಬರು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿಗಳ ಸೇವಾನಿಷ್ಠತೆಗಳಿಂದಲೂ ತಿ.ತಿ.ದೇ. ಸಿಬ್ಬಂದಿಯ ಹಾಗೂ ಶ್ರೀವಾರಿಸೇವೆಯ ಸ್ವಯಂ ಸೇವಕ ಪಡೆಯ ಸೇವಾ ಮನೋಭಾವದಿಂದಲೂ ಯಾತ್ರಿಕರ ತೊಂದರೆಗಳನ್ನು ನಿವಾರಿಸಲು ಸಮರ ಸಿದ್ಧತೆಯೋಪಾದಿಯಲ್ಲಿ ಕೆಲಸಗಳನ್ನು ಕೈಗೊಳ್ಳಲಾಯಿತು. ತಿರುಮಲೆಯಲ್ಲಿಯೂ ತಿರುಪತಿಯಲ್ಲಿಯೂ ಬಸ್ ರೈಲುಗಳ ನಿಲುಗಡೆಯಿಂದಾಗಿ ಊರಿಗೆ ತೆರಳಲಾಗದವರಿಗೆ ಅವರಿದ್ದ ಕಡೆಯೇ ಉಚಿತ ಊಟದ ಪೊಟ್ಟಣಗಳನ್ನು ಹಂಚಲಾಯಿತು. ಮಕ್ಕಳಿಗೆಂದು ಶುದ್ಧ ಹಾಲನ್ನೂ ವಿತರಿಸಲಾಯಿತು. ಕಾರ್ಯನಿರ್ವಹಣಾಧಿಕಾರಿ ಡಾ|| ಪಿ. ಕೃಷ್ಣಯ್ಯನವರು ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ನಾರಾಯಣ ಅವರೊಂದಿಗೆ ತಿರುಪತಿಯ ರೈಲ್ವೆ ನಿಲ್ದಾಣದಲ್ಲಿ ನಿಂತು ಯಾತ್ರಿಕರ ಸಮಸ್ಯೆಗಳನ್ನು ತಿಳಿದು ಪರಿಷ್ಕಾರ ಹುಡುಕುವಲ್ಲಿ ನೆರವಾದರು. ತಿರುಮಲೆಯಲ್ಲಿ ಸಂಯುಕ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಬಾಲಸುಬ್ರಹ್ಮಣ್ಯಂ ಮಳೆಯ ರಭಸದಲ್ಲಿಯೂ ಕೊಡೆ ಹಿಡಿದು ಯಾತ್ರಿಕರ ಬಳಿಗೇ ನಡೆದು ಅವರಿಗೆ ಸಾಂತ್ವನ ಹೇಳುತ್ತ ಮಾರ್ಗದರ್ಶನ ನೀಡಿದರು.

ಮಳೆಯ ಹಾವಳಿಯಲ್ಲಿ ಹೊರ ಪ್ರಪಂಚದಿಂದ ಪ್ರತ್ಯೇಕವಾದ ಕಡಪ, ನೆಲ್ಲೂರು ಜಿಲ್ಲೆಗಳ ಜಲಾವೃತ ಪ್ರದೇಶಗಳ ಜನರಿಗೆ ಆಹಾರವನ್ನು, ಕುಡಿಯುವ ನೀರನ್ನು ತಲುಪಿಸುವಲ್ಲಿ ತಿ.ತಿ.ದೇ. ಕೆಲಸ ಮಾಡಿತು. ತಿರುಮಲೆಯ ಅನ್ನದಾನ ಕ್ಯಾಂಟೀನ್‌ನ ಅಡಿಗೆ ಮನೆಯಲ್ಲಿ ಪುಳಿಯೋಗರೆ ಪೊಟ್ಟಣಗಳನ್ನು ತಯಾರಿಸುವುದರಲ್ಲಿ ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ ಅವರು ನೇತೃತ್ವ ವಹಿಸಿದರೆ ಅಲ್ಲಿಂದ ಇಳಿದು ಬಂದ ಆಹಾರದ, ನೀರಿನ ಪೊಟ್ಟಣಗಳು ರೇಣಿಗುಂಟದಲ್ಲಿ ಹೆಲಿಕಾಪ್ಟರ್ ಸೇರುವವರೆಗಿನ ಉಸ್ತುವಾರಿಯನ್ನು ತಿರುಪತಿಯ ಜೆ.ಇ.ಓ. ಶ್ರೀ ನಾರಾಯಣ ವಹಿಸಿದ್ದರು.

ಮೊದಲ ಮೂರು ದಿನದ ಬ್ರಹ್ಮೋತ್ಸವದಲ್ಲಿ ನಿರೀಕ್ಷಿತ ಜನರ ಆಗಮನಕ್ಕೆ ಅಡೆತಡೆಗಳುಂಟಾದವಾದರೂ ಬೆಟ್ಟಕ್ಕೆ ಬಂದು ಹೋಗುವ ಮಂದಿಗೆ ತೊಂದರೆಯಾಗದಂತೆ ನೋಡಲು ಎಲ್ಲ ತಿ.ತಿ.ದೇ. ಬಸ್‌ಗಳನ್ನೂ, ವ್ಯಾನುಗಳನ್ನೂ ಬಳಸಲಾಯಿತು. ಆರ್.ಟಿ.ಸಿ. ಯವರೂ ಕಡಿಮೆ ಸಂಖ್ಯೆಯಲ್ಲಿ ಬಸ್‌ಗಳನ್ನು ನಡೆಸಿದರು. ಹೀಗಾಗಿ ಎರಡನೆಯ ಬ್ರಹ್ಮೋತ್ಸವದ ಗರುಡೋತ್ಸವದ ದಿನದ ಹೊತ್ತಿಗೆ, ರಸ್ತೆ ತೆರೆದಂತಾಗಿ ಅರ್ಧಲಕ್ಷದಷ್ಟು ಮಂದಿ ನೆರೆದಿದ್ದರೂ ಅದನ್ನು ಕಡಿಮೆ ಜನವೆಂದೇ ತಿಳಿಯಬಹುದು. ರಥೋತ್ಸವದ ಹೊತ್ತಿಗೆ ಈ ಸಾಂದ್ರತೆ ಹೆಚ್ಚಿದ್ದು ಉಂಟಾದರೂ, ಅದರ ನಂತರದ ದಿನಗಳಲ್ಲಿ ಜನರ ರದ್ದಿ ಒತ್ತಡ ಮತ್ತೂ ಹೆಚ್ಚಾಯಿತು. ಎರಡನೇ ಕ್ಯೂಕಾಂಪ್ಲೆಕ್ಸ್ ತುಂಬಿ ಜನ ಹೊರಗಡೆಯ ಸಾಲಿನಲ್ಲಿ ನಿಲ್ಲುವಂತಾಗಿದ್ದು ನೋಡಬಂದಿತು.

ಬೇರೆ ಬೇರೆ ರಾಜ್ಯಗಳ ಸಾರಿಗೆ ಬಸ್‌ಗಳು ಬಂದು ಹೋಗುತ್ತಿದ್ದವು. ಜೊತೆಗೇ ರೈಲ್‌ವೇಯವರೂ ಹೆಚ್ಚಿನ ರೈಲುಗಳನ್ನು ತಿರುಪತಿಗೆ ಹರಿಸಿದ್ದರು. ಹೀಗಾಗಿ ಮೊದಲ ಒಂದೆರಡು ದಿನ ಮಾತ್ರವೇ ತಾಪತ್ರಯವೆಂಬ ಮಾತು ಕೇಳಿಬಂದಿತು. ಮೊದಲ ಎರಡು ದಿನಗಳ ತೂಫಾನಿನ ಗಾಳಿಯಲ್ಲಿ ತಿರುಪತಿಯಲ್ಲಿಯೂ ತಿರುಮಲೆಯಲ್ಲಿಯೂ ನಿಲ್ಲಿಸಿದ ವಿದ್ಯುದಲಂಕಾರಗಳ ಕೆಲವು ಕಮಾನುಗಳು ನೆಲಕ್ಕೊರಗಿದವು. ಆದರಿಂದಾಗಿ ಹೊಸ ತಪಾಸಣೆ ನಡೆಸಿ ಬಲ ಕಡಿಮೆಯಿದ್ದ ಕಟೌಟ್‌ಗಳನ್ನು ಕಮಾನುಗಳನ್ನು ತೆಗೆದು ಹಾಕಲಾಯಿತು. ಘಟ್ಟದ ರಸ್ತೆಗಳಲ್ಲಿ ಸಾರಿಗೆ ಸುಸೂತ್ರವಾಗಿರುವಂತೆ ನೋಡಿಕೊಳ್ಳಲಾಯಿತು. ಹೀಗೆ ಬ್ರಹ್ಮೋತ್ಸವಗಳು ಅಡಚಣೆಯಿಲ್ಲದೆ, ಸಂಭ್ರಮದಿಂದ ನಡೆದವು.

Edited and Published on behalf of T. T. Devasthanams by Dr. N. S. Rama Murthy, and printed at T.T.D. Press
by I. Parvateeswara Rao, Manager, T. T. D. Press, Tirupati - 517 507.

# ತಿರುಮಲೆಯಲ್ಲಿ

## ಮಾಡಬೇಕಾದವು ಹಾಗೂ ಮಾಡಬಾರದವುಗಳು

**ಮಾಡಬೇಕಾದವು :**

★ ತಿರುಮಲೆಗೆ ಬರುವ ಮುನ್ನ ನಿಮ್ಮ ಇಷ್ಟ ಅಥವಾ ಕುಲದೈವವನ್ನು ಪೂಜಿಸಿರಿ.

★ ನಿಮ್ಮ ಪ್ರಯಾಣದ ಟಿಕೆಟ್‌ಗಳನ್ನು, ತಿರುಮಲೆಯಲ್ಲಿ ನಿಮ್ಮ ವಸತಿಯನ್ನು ಮೊದಲೇ ಕಾಯ್ದಿರಿಸಿ.

★ ಶ್ರೀ ವೆಂಕಟೇಶ್ವರಸ್ವಾಮಿಯನ್ನು ದರ್ಶಿಸುವ ಮೊದಲು ಸ್ವಾಮಿಪುಷ್ಕರಿಣಿಯಲ್ಲಿ ಸ್ನಾನಮಾಡಿ,
ಅಲ್ಲಿಯೇ ಇರುವ ಶ್ರೀ ವರಾಹಸ್ವಾಮಿಯನ್ನು ದರ್ಶಿಸಿರಿ.

★ ಆಲಯವನ್ನು ಪ್ರವೇಶಿಸುವ ಮೊದಲು ಸ್ನಾನಮಾಡಿ, ಶುಭ್ರವಾದ ಉಡುಪು ಧರಿಸಿರಿ.
ಆಲಯದ ಒಳಗಡೆ ಸ್ವಾಮಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸಿ.

★ ಆಲಯದ ಒಳಗಡೆ ಗಂಭೀರ ಮೌನವನ್ನು ಪಾಲಿಸಿರಿ ಮತ್ತು
ಮನಸ್ಸಿನಲ್ಲಿ **"ಓಂ ನಮೋ ವೇಂಕಟೇಶಾಯ"** ಎಂದು ಜಪಿಸಿರಿ.

★ ತಿರುಮಲೆಯಲ್ಲಿ ಪಾಪನಾಶಿನಿಯಲ್ಲೂ, ಆಕಾಶಗಂಗೆಯಲ್ಲೂ ಸ್ನಾನಮಾಡಿರಿ.

★ ತಿರುಮಲೆಗೆ ಬಂದಾಗ ಪ್ರಾಚೀನಪರಂಪರೆಯನ್ನೂ ಆಚಾರವನ್ನೂ ಗೌರವಿಸಿ.

★ ಸಹಯಾತ್ರಿಕರಲ್ಲಿನ ಧಾರ್ಮಿಕ ಭಾವನೆಯನ್ನು ಗೌರವಿಸಿ, ಪ್ರೋತ್ಸಾಹಿಸಿ.

★ ತಮ್ಮ ಕಾಣಿಕೆಗಳನ್ನು ಹುಂಡಿಯಲ್ಲಿ ಮಾತ್ರವೇ ಸಮರ್ಪಿಸಿ.

★ ತಿರುಮಲೆಯಲ್ಲಿ ನಿಮ್ಮ ಸೇವೆ ಹಾಗೂ ಆಲಯದ ಬಗ್ಗೆ ವಿವರಗಳಿಗಾಗಿ
ತಿ.ತಿ.ದೇ. ವಿಚಾರಣಾಕೇಂದ್ರದಲ್ಲಿ ಕೇಳಿ ವಿವರಗಳನ್ನು ಪಡೆಯಿರಿ.

**ಮಾಡಬಾರದವು :**

★ ತಮ್ಮೊಂದಿಗೆ ಹೆಚ್ಚಿನ ಹಣ, ಆಭರಣಗಳನ್ನು ತರಬೇಡಿ.

★ ಮಾಂಸಾಹಾರವನ್ನು ಬಳಸಬೇಡಿರಿ. ಮಾದಕ ವಸ್ತು ಪೇಯಗಳನ್ನು ಬಳಸಬೇಡಿರಿ. ಧೂಮಪಾನ ಮಾಡಬೇಡಿರಿ.

★ ವಸತಿಗಾಗಿ, ಶೀಘ್ರದರ್ಶನಕ್ಕಾಗಿ ದಳ್ಳಾಳಿಗಳನ್ನು ಆಶ್ರಯಿಸಬೇಡಿರಿ.

★ ಆಲಯದ ಒಳಗೆ, ಹೊರಗೆ ಪಾದರಕ್ಷೆಗಳನ್ನು ಧರಿಸಿ ಓಡಾಡಬೇಡಿರಿ.

★ ದೇವರನ್ನು ಸೇವಿಸುವುದರ ಹೊರತು ಬೇರೆ ಯಾವ ಕಾರಣಕ್ಕೂ ತಿರುಮಲೆಗೆ ಬಾರದಿರಿ.
ಸಂಪ್ರದಾಯದಂತೆ ಆಲಯ ಪ್ರವೇಶ ನಿಷೇಧವಿದ್ದಲ್ಲಿ ಆಲಯ ಪ್ರವೇಶ ಮಾಡದಿರಿ.

★ ದೇವರ ದರ್ಶನಕ್ಕಾಗಿ ನೂಕುನುಗ್ಗಲು ಮಾಡದೆ ಸರತಿಯ ಸಾಲಿನಲ್ಲಿ ಸೇರಿರಿ.

★ ದೇವಾಲಯದಲ್ಲಿ ಉಗುಳುವುದೇ ಮುಂತಾದವುಗಳನ್ನು ಮಾಡದಿರಿ.

★ ಭಿಕ್ಷೆಯನ್ನು ಪ್ರೋತ್ಸಾಹಿಸದಿರಿ. ಹುಸಿ ಪ್ರಸಾದಗಳನ್ನು ಕೊಳ್ಳಬೇಡಿರಿ.

★ ತಿರುಮಲೆಯಲ್ಲಿ ಎಲ್ಲ ಹೂವುಗಳೂ ದೇವರಿಗೇ. ತಾವು ಹೂವು ಮುಡಿಯದಿರಿ.